# ಹೊಸ ದಿಕ್ಕು



Harsha

೭,೮,೯ ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ ಪತ್ರಿಕೆ.

* ಖಾಸಗಿ ಪ್ರಸಾರಕ್ಕಾಗಿ ಮಾತ್ರ

# ಹೊಸ ದಿಕ್ಕು ಸಾಹಿತ್ಯಿಕ-ಸಾಂಸ್ಕೃತಿಕ ದ್ವೈಮಾಸಿಕ

ಸಂಪುಟ–೨ ಸಂಚಿಕೆ–೭, ೮, ೯, ಮೇ–ಅಕ್ಟೋಬರ ೯೩

ಸಂಪಾದಕ : **ತಿಮ್ಮಯ್ಯ ಪುರ್ಲೆ**
ಸಲಹೆ : ಚಂದ್ರಕಾಂತ ಕರದಳ್ಳಿ, ಎಸ್. ಬಿ. ಹೊನ್ಕಲ್, ಸೂಗಯ್ಯ ಹಿರೇಮಠ

ನೀವು ಕಳಿಸುವ ಚಂದಾ "ಹೊಸ ದಿಕ್ಕು" ಬೆಳವಣಿಗೆಯ ಸಂಕೇತ

| | | | | |
|---|---|---|---|---|
| ವಾರ್ಷಿಕ ಚಂದಾ : | ರೂ. ೪೦–೦೦ | ⊛ | ಆಜೀವ ಚಂದಾ : | ರೂ. ೪೦೦–೦೦ |
| ಸಂಸ್ಥೆಗಳಿಗೆ | ರೂ. ೫೦–೦೦ | ⊛ | ,, | ರೂ. ೫೦೦–೦೦ |

ಹೈದ್ರಾಬಾದ ಕರ್ನಾಟಕ ಹಾಗು ಸುತ್ತಲಿನ ಬಿಜಾಪುರ, ಬಳ್ಳಾರಿ ಜಿಲ್ಲೆಗಳ ಲೇಖಕರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ ಮೂಲಕ ಕನ್ನಡ ನಾಡಿನಾದ್ಯಂತ ತಲುಪಲು ಇಚ್ಛಿಸುವ "ಹೊಸ ದಿಕ್ಕು"ಗೆ ದಯವಿಟ್ಟು ನೀವು ಚಂದಾದಾರರಾಗಿ, ನಿಮ್ಮ ಸ್ನೇಹಿತರನ್ನು, ಆಸಕ್ತರನ್ನು ಚಂದಾದಾರರಾಗಿಸಿರಿ. ಲೇಖನ, ಕವನ, ಕಥೆ, ಇತ್ಯಾದಿ ಕಳಿಸುವವರು ಸ್ವೀಕೃತಿ ಬಗ್ಗೆ ತಿಳಿಯಲು ಸ್ವವಿಳಾಸದ ಕಾರ್ಡ್ ಇಡಿ. ಅಂದವಾಗಿ ಬರೆದು ಅಥವಾ ಸುಂದರವಾಗಿ ಟೈಪು ಮಾಡಿಸಿ ಕಳಿಸಿರಿ, ಸದಸ್ಯರಾಗಿ ಪತ್ರಿಕೆಗೆ ಬರಹ ಕಳಿಸಿರಿ.

ಸಂಪಾದಕರು :
"ಹೊಸ ದಿಕ್ಕು"
ಗೀತಾಂಜಲಿ ಬಿಲ್ಡಿಂಗ್
(ದಿಗ್ಗಿ ಬಿಲ್ಡಿಂಗ್ ಹತ್ತಿರ)
ಅಂಚೆ : ಶಹಾಪೂರ ೫೮೫ ೨೨೩

ಚಂದಾ ಕಳಿಸುವ ವಿಳಾಸ :
ಚಂದ್ರಕಾಂತ ಕರದಳ್ಳಿ
ಶಿವ ಪ್ರಸಾದ ನಿಲಯ
ಶಹಾಪೂರ ೫೮೫ ೨೨೩
ಕಲಬುರ್ಗಿ ಜಿಲ್ಲೆ (ಕರ್ನಾಟಕ)

# ಪತ್ರಿಕೆಯ ಅಂತರಂಗದಿಂದ ನಿಮ್ಮ ಅಂತರಂಗಕ್ಕೆ

ಭೂ ಕಂಪದ ಭಯದ ನೆರಳಿನಲ್ಲಿ ಬದುಕುತ್ತಲಿರುವ ನಮ್ಮ ಪಕ್ಕದ ಮಹಾರಾಷ್ಟ್ರ ಹಾಗು ನಮ್ಮ ಕಲಬುರ್ಗಿ, ಬಿಜಾಪೂರ ಜಿಲ್ಲೆಯ ಜನತೆಗೆ ಈಗ ಸಾಂತ್ವನಬೇಕಿದೆ. ಕರಾಳಮಾರಣ ಹೋಮ ನಡೆದ ಸೆಪ್ಟೆಂಬರ ೩೦ರ ರಾತ್ರಿಯ ಭೂ ಕಂಪನದಿಂದ ಸಾವಿರಾರು ಜನ ಇಲ್ಲವಾದರು. ಅವರ ಅವಲಂಬಿತರ ನೋವು-ಹತಾಶೆ ಅಸದಳ. ಅಪಾರ ಆಸ್ತಿಗೂ ಹಾನಿಯಾಗಿದೆ. ಇಲ್ಲಿ ಹೀಗಾದರೆ ರಾಯಚೂರ ಜಿಲ್ಲೆಯಲ್ಲಿ ಧಾರಾಕಾರವಾಗಿ ಸುರಿದ ಮಳೆ. ಒಟ್ಟಾರೆ ಪ್ರಕೃತಿಯೇ ಮುನಿದಿರುವಾಗ ಯಾರ ಮೊರೆ ಹೋಗುವದು.

ರಾತ್ರಿ ಮಲಗಿ ಬೆಳಗ್ಗೆದ್ದು ಹೊರ ಬರುವವರೆಗೆ ನಾವು ಬದುಕಿರುತ್ತೇವೆ ಎಂಬ ಭರವಸೆ ಇಲ್ಲದವರಂತೆ ನಮ್ಮ ಜನ ಬಯಲನ್ನು ಅರಸಿ ಹೋಗ ತೊಡಗಿದ್ದಾರೆ. ಎಂದಾದರೂ ಸಾಯುವದು ಇದ್ದೇ ಇದೆ. ಸತ್ತರೆ ನಿಶ್ಚಿಂತೆಯಾಯಿತು ಎಂದು ಮಲಗುವವರು ಉಂಟು. ಆದರೂ ಜೀವ-ಬದುಕು ಯಾರಿಗೆ ತಾನೇ ಅಪ್ರಿಯ.

ಭೂ ಕಂಪನವಾಗುವ ದಿನಾಂಕಗಳು ಡಿಸೆಂಬರ ತಿಂಗಳವರೆಗೆ ವದಂತಿಯಾಗಿ ಈಗಾಗಲೇ ಇಲ್ಲಿ ಹಬ್ಬ ತೊಡಗಿವೆ. ಅವು ಗಾಳಿ ಮಾತು ಇರಬಹುದು. ಗಾಳಿ ಮಾತೇ ಆಗಿರಲಿ ಎಂಬ ಮನಸ್ಸು.

ಈ ಭೂ ಕಂಪನದಲ್ಲಿ ಮಡಿದವರಿಗಾಗಿ ಹೃದಯವಂತ ನಾಡಿನ ಜನತೆಯಲ್ಲಿ ಅನುಕಂಪವಿರಲಿ. ಅವರ ಅವಲಂಬಿತರ ನೋವನ್ನು ಹಂಚಿ ಕೊಳ್ಳೋಣ. ಅವರಿಗೆ ಸಾಂತ್ವನ ತುಂಬಿ ಹೊಸ ಬಾಳಿನ ಆಸೆ ಚಿಗುರಿಸುವ ಶಕ್ತಿಯನ್ನು ಆ ಮುನಿದ ನಿಸರ್ಗವೆ ತುಂಬಲಿ ಎಂದು ಪ್ರಾರ್ಥಿಸುತ್ತಾ ಆತಂಕದಿಂದಲೇ ಬರುವ ದಿನಗಳನ್ನು ಎದುರು ನೋಡುತ್ತಾ ಮುಗಿಸುವೆ.

❁ ತಿಮ್ಮಯ್ಯ ಪುರ್ಲೆ

# ೨ನೇ ವರ್ಷದಲ್ಲಿ ಹೊಸ ದಿಕ್ಕು...

ಬಹುದಿನಗಳ ಹಿಂದಿನಿಂದಲೂ ನಮ್ಮ ಹೈದ್ರಾಬಾದ ಕರ್ನಾಟಕದ ನೆಲದಿಂದಲೇ ಸಾಹಿತ್ಯಿಕ ಪತ್ರಿಕೆಯೊಂದನ್ನು ಹೊರತರುವ ಹಂಬಲ ನಮಗಿತ್ತು ಇದೀಗ ನಮ್ಮ ಕನಸುಗಳಿಗೆ ರೂಪುಕೊಡಲು ನಿಮ್ಮ ಭಾವನೆಗಳನ್ನು ಅರಳಿಸಲು "ಹೊಸ ದಿಕ್ಕು" ಎನ್ನುವ ಸಾಹಿತ್ಯಿಕ ಪತ್ರಿಕೆಯೊಂದನ್ನು ಖಾಸಗಿ ಪ್ರಸಾರಕ್ಕಾಗಿ ಆರಂಭಿಸುತ್ತಿದ್ದೇವೆ.

ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವ ಈ ಹೈದ್ರಾಬಾದ ಕರ್ನಾಟಕ ಹಾಗೂ ನೆರೆಯ ಜಿಲ್ಲೆಗಳಾದ ಬಿಜಾಪುರ, ಬಳ್ಳಾರಿ ಜಿಲ್ಲೆಗಳಲ್ಲಿ ಪ್ರತಿಭೆಗಳಿಗೆ ಕೊರತೆ ಇಲ್ಲ. ಆದರೆ ಅವರನ್ನು ಗುರುತಿಸುವ, ಬೆಳಸುವ ವೇದಿಕೆಗಳ ಕೊರತೆ ಇಲ್ಲಿದೆ. ಈ ನಿಟ್ಟಿನಲ್ಲಿ ಹಲವಾರು ಪತ್ರಿಕೆಗಳು ಕಾರ್ಯನಿರತವಾಗಿದ್ದರೂ ಸಹ ದಿನೇ ದಿನೇ ಬೆಳೆಯುತ್ತಿರುವ ಬರಹಗಾರರನ್ನು ಪ್ರೋತ್ಸಾಹಿಸುವ ಪತ್ರಿಕೆಗಳ ಸಂಖ್ಯೆ ಈ ನೆಲದಲ್ಲಿ ಕಡಿಮೆ ಎಂದೇ ಹೇಳಬೇಕಿದೆ.

ನಾಡಿನ ಹಿರಿಯ ಲೇಖಕರ, ವಿಮರ್ಶಕರ, ಕವಿ–ಸಾಹಿತಿಗಳು, ಸಲಹೆ, ಮಾರ್ಗದರ್ಶನ, ಚಿಂತನ ಜೊತೆಗೆ ಉಪಯುಕ್ತ ಸಂವಾದಕ್ಕೆ ವೇದಿಕೆ ಒದಗಿಸುವ ಮೂಲಕ ಯುವ ಪೀಳಿಗೆಯ ಬರಹಗಾರರನ್ನು ಗಟ್ಟಿಯಾಗಿ ರೂಪಿಸುವ-ಬೆಳಸುವ-ಗುರುತಿಸುವ ಹಂಬಲ ನಮ್ಮದು. ಈ ಎರಡು ವರ್ಗದವರ ಮಧ್ಯೆ "ಹೊಸ ದಿಕ್ಕು" ಪತ್ರಿಕೆಯ ಮೂಲಕ ವೇದಿಕೆ ಒದಗಿಸುವ ಕೆಲಸವಷ್ಟೇ ನಮ್ಮದು. ತಮ್ಮ ತಮ್ಮ ಕ್ಷೇತ್ರದಲ್ಲಿ ಸಾಕಷ್ಟು ಹೆಸರುವಾಸಿಯಾದ ಲೇಖಕರು ಈ ಪತ್ರಿಕೆಯಲ್ಲಿ ಬರೆಯುವ ಮೂಲಕ ತರುಣ ಪೀಳಿಗೆಯ ಬರಹಗಾರರಿಗೆ ಸಾಹಿತ್ಯದ ಹಸಿವನ್ನು ತಣಿಸಬೇಕಿದೆ ಎಂದು ವಿನಂತಿಸುತ್ತೇವೆ. ಜೊತೆಗೆ ಇಲ್ಲಿಯ ಸಹೃದಯ ಓದುಗರು, ಸಾಹಿತ್ಯಾಸಕ್ತರು, ಬರೆಯುವ ಹಂಬಲವುಳ್ಳವರು ಸಾಹಿತ್ಯಿಕ-ಸಾಂಸ್ಕೃತಿಕ ಲೋಕದ ಕಾಳಜಿವುಳ್ಳವರೆಲ್ಲರೂ ಈ ಪತ್ರಿಕೆ ನಮ್ಮದು ಇದರ ಜೊತೆಗೆ ನಾವು ಬೆಳೆಯೋಣ, ಬೆಳೆಸೋಣ, ಎಂಬ ಉದಾತ್ತ ವಿಚಾರದೊಂದಿಗೆ ಹೆಗಲು ಕೊಟ್ಟು ನಿಲ್ಲಬೇಕಿದೆ.

"ಹೈದ್ರಾಬಾದ ಕರ್ನಾಟಕ" ಎಂಬ ಹೆಸರಿನ ಹಿಂದೆಯೂ, ಉರ್ದು–ಮರಾಠಿ ಭಾಷೆಗಳ ಪ್ರಭಾವದ ಮಧ್ಯೆಯೂ ನಾವು ನಮ್ಮ ಕನ್ನಡತನವನ್ನು ಉಳಿಸಿ ಕೊಂಡು ಬಂದಿದ್ದೇವೆ. ಅದನ್ನು ಬೆಳೆಸಿಕೊಂಡು ಹೋಗುವುದಕ್ಕಾಗಿ "ಹೊಸ ದಿಕ್ಕು" ಸಿದ್ಧವಾಗಿ ನಿಂತಿದೆ. ಹಿರಿಯರ ಮಾರ್ಗದರ್ಶನದಲ್ಲಿ ತರುಣ ಪೀಳಿಗೆಯ ಬರಹಗಾರರು ಹಾಗೂ ವಿದ್ಯಾರ್ಥಿಗಳಲ್ಲಿಯ ಸುಪ್ತ ಪ್ರತಿಭೆಗಳನ್ನು ಬೆಳೆಸುವ ಹಂಬಲದೊಂದಿಗೆ ನಾಡಿನ ಸಾಹಿತ್ಯಿಕ ಮುಖ್ಯ ವಾಹಿನಿಯಲ್ಲಿ ಈ ನೆಲದ ಪಾಲೇನೂ ಕಡಿಮೆ ಇಲ್ಲ ಎಂದು ತೋರುವ ಹಂಬಲ ನಮ್ಮದು.

ಈ ಮೇಲಿನದು ನಾವು 'ಹೊಸ ದಿಕ್ಕು' ಆರಂಭಿಸುವಾಗ ಕೊಟ್ಟ ಪ್ರಕಟನೆಯಾಗಿತ್ತು. ಇಂದಿಗೂ ನಮ್ಮ ನಿಲುವಿನಲ್ಲಿ ಯಾವ ಬದಲಾವಣೆ ಇಲ್ಲ. ಅದು ಈ ಒಂದು ವರ್ಷದಲ್ಲಿ ಅದೇಷ್ಟರ ಮಟ್ಟಿಗೆ ಈಡೇರಿದೆ ಎಂಬುದನ್ನು ತಾವು ಹೇಳಬೇಕು. ಈಗಾಗಲೇ ಈ ದಿಸೆಯುಲ್ಲಿ ನೂರಾರು ಅನಿಸಿಕೆಗಳು ನಮ್ಮನ್ನು ತಲುಪಿವೆ. ಬೆಂಬಲಿಸಿದವರಿಗೆಲ್ಲಾ, ಮೆಚ್ಚಿದವರಿಗೆ ಹಾಗೂ ಸೂಕ್ತ ಸಲಹೆ ನೀಡಿದವರಿಗೆಲ್ಲಾ ಪತ್ರಿಕೆಯ ಕೃತಜ್ಞತೆಗಳನ್ನು ಅರ್ಪಿಸಲು ಪತ್ರಿಕೆಯ ಬಳಗದ ಸ್ನೇಹಿತರಿಗೆ–ಹಿತೈಷಿಗಳಿಗೆ ಸಂತಸ ತಂದಿದೆ.

ಪತ್ರಿಕೆ ನಾವು ಆರಂಭಿಸಿದ್ದ ಒಂದು ಮುಖ್ಯ ಘಟ್ಟದಲ್ಲಿ. ಬರವಣಿಗೆಯ ಸ್ವಾತಂತ್ರದ ಮೇಲೆ ಒತ್ತಡ ಬಂದಾಗ ಪಲಾಯನವಾದಿಯಾದವನು ಹೆಜ್ಜೆ ಹಿಂದಿಟ್ಟು ಅಸ್ತಂಗತನಾಗುತ್ತಾನೆ. ಆದರೆ ಕಳೆದು ಕೊಂಡಲ್ಲೆ ಹುಡುಕಬೇಕು ಎಂಬ ಸ್ವಭಾವದ ನಾವು ನಮ್ಮಂಥವರ ಅಭಿವ್ಯಕ್ತಿಗಾಗಿ ಒಂದು ವೇದಿಕೆ ಇರಲಿ ಎಂದು ಇದನ್ನು ಹುಟ್ಟು ಹಾಕಿದೆವು. ಆರಂಭದ ಉತ್ಸಾಹ ಈಗ ಇಲ್ಲವಾದರು ಅದು ಬತ್ತಿ ಹೋಗುವಂತಹದಲ್ಲ. ಅಷ್ಟರ ಮಟ್ಟಿಗೆ ಪತ್ರಿಕೆಯ ಓದುಗರು ಹಿತೈಷಿಗಳು ತನು-ಮನ-ಧನದಿಂದ ಸಹಕರಿಸಿದ್ದಾರೆ. ಹಾಗಾಗಿ ಚಂದಾ ಹಣ ನೀಡಿ ಓದಿದ ಎಲ್ಲ ಮಹನೀಯರಿಗೂ, ಜಾಹೀರಾತು ನೀಡಿದ ಹಿತೈಷಿಗಳಿಗೂ, ಅಮೂಲ್ಯ ಬರಹ ಕಳಿಸಿ ಪತ್ರಿಕೆ ಗಟ್ಟಿಯಾಗಿ ನಾಡಿನ ಸಾಹಿತ್ಯಾಸಕ್ತರ ಗಮನ ಸೆಳೆಯುಲು ಕಾರಣರಾದ ಬರಹಗಾರರಿಗೂ ಮುಖ್ಯ ಲೇಖಕರಿಗೂ-ವಿಮರ್ಶಕರಿಗೂ ಮೊದಲು ವಂದನೆಗಳು.

ನಾವು ಬಲ್ಲ ಎಲ್ಲರಿಗೂ ಪತ್ರಿಕೆ ಕಳಿಸುತ್ತಾ ಬಂದೆವು. ಯಾರನ್ನು ಬಾಯಿಬಿಟ್ಟು ಚಂದಾ ಹಣ ಕೊಡಿ ಎಂದು ಕೇಳಲಿಲ್ಲ. ಕೊಟ್ಟವರಿಂದ ಗೌರವವಾಗಿ ಸ್ವೀಕರಿಸಿ ಪತ್ರಿಕೆಯನ್ನು ಇಲ್ಲಿಯವರೆಗೆ ತಂದು ಸಲ್ಲಿಸಿದ್ದೇವೆ. ಆರಂಭದ ವರ್ಷವಾದ್ದರಿಂದ ಪತ್ರಿಕೆ ಎಲ್ಲರಿಗೂ ಪರಿಚಯವಾಗಲಿ ಎಂದು ನಾವಾಗಿ ನಮಗೆ ಪರಿಚಯವಿದ್ದವರಿಗೆಲ್ಲಾ ಪತ್ರಿಕೆ ಕಳಿಸಿದೆವು. ಅದರಲ್ಲಿ ಸಾಕಷ್ಟು ಜನ ಚಂದಾ ಹಣ ಕಳಿಸಿದರು. ಕೆಲವರು ಕಳಿಸಲಿಲ್ಲ. ಪತ್ರಿಕೆ ಬರುತ್ತಿದ ಎಂದಾದರು ಬರೆಯುಲಿಲ್ಲ. ಆ ಬಗ್ಗೆ ನಮಗೇನು ಬೇಜಾರಿಲ್ಲ. ಯಾಕೆಂದರೆ ನಾವಾಗಿ ಕಳಿಸಿದ್ದರಿಂದ ಅಂತಹ ನಿರೀಕ್ಷೆಯನ್ನು ನಾವು ಇಟ್ಟುಕೊಂಡಿರಲಿಲ್ಲ. ಆದರೆ ಈಗ ಅದೇ ರೀತಿ ನಮಗೆ ಕಳಿಸುವ ಶಕ್ತಿಯಿಲ್ಲ. ಹಾಗಾಗಿ ಯಾಗು ತಮಗೆ ಕಳಿಸುತ್ತಿಲ್ಲ ಎಂದು ಬೇಜಾರು ಮಾಡಿಕೋ ಬಾರದು. ತಮ್ಮ ಪತ್ತಿರದವರಲ್ಲಿ ಬರುತ್ತಿದ್ದರೆ ಓದಿ. ತಮಗೆ ಸದಸ್ಯರಾಗಬೇಕೆನಿಸಿದರೆ ಮಾತ್ರ ಚಂದಾ ಹಣ ಕಳಿಸಿ ಸದಸ್ಯರಾಗಿ ಪತ್ರಿಕೆ ಪಡೆಯಿರಿ.

ಪತ್ರಿಕೆ ಈಗಾಗಲೇ ನಾಡಿನಾದ್ಯಂತ ತನ್ನತನದಿಂದ ಗುರ್ತಿಸಿಕೊಂಡಿದೆ ಸಾಹಿತ್ಯಕ ಪತ್ರಿಕೆ ನಡೆಸುವದು ರಾಜಕೀಯ ಪತ್ರಿಕೆ ನಡೆಸುವಷ್ಟು ಸರಳವಲ್ಲ ಎಂಬುದು ಈ ಕ್ಷೇತ್ರದಲ್ಲಿರುವವರಿಗೆಲ್ಲಾ ಗೊತ್ತು. ಹಾಗಾಗಿ ಒಣ ಅಹಂಕಾರದ

ಮಾತು ಆಡುವ ಬದಲು ಸತ್ಯವನ್ನು ನಿಮಗೆ ತಿಳಿಸಿರುವೆ. ಪತ್ರಿಕೆಯನ್ನು ನಿರಂತರವಾಗಿ ನಡೆಸಿಕೊಂಡು ಹೋಗುವ ಹಂಬಲ ನಮಗಿದೆ. ನಡೆಸುತ್ತೇವೆ. ಈ ಮಧ್ಯೆ ರಾಜಕೀಯ ಪತ್ರಿಕೆ ಆರಂಭಿಸಿ ಎಂದು ಕೆಲವರು ಬರೆಯುತ್ತಾರೆ, ನನ್ನ ಪುಸ್ತಕವನ್ನು ನಿಮ್ಮ ಪತ್ರಿಕೆ ಪ್ರಕಾಶನದ ವತಿಯಿಂದ ಪ್ರಕಟಿಸಿ ಎಂದು ಕೆಲವರು ಬರೆಯುತ್ತಾರೆ, ಪತ್ರಿಕೆಗೆ ಚಂದಾ ಹಣ ಕಳಿಸದವರು(ಸದಸ್ಯರಾಗದವರು) ಸಹ ಅವರ ಅಮೂಲ್ಯ! ಬರಹವನ್ನು ಕಳಿಸಿ ಪ್ರಕಟಿಸಲು ಒತ್ತಾಯಿಸುತ್ತಾರೆ. ಇನ್ನೂ ಕೆಲವರು ತಮ್ಮ ವೈಯಕ್ತಿಕ ಯಾರ ಮೇಲಿನದನ್ನೊ ತೀರಿಸಲು ನಮಗೆ ಪ್ರಚೋದಿಸಿ ಬರೆಯುತ್ತಾರೆ. (ಈ ಎಲ್ಲವು ಕೇವಲ ನಮ್ಮ ಗುಲಬರ್ಗಾ ಜಿಲ್ಲೆಗೆ ಸೀಮಿತವಾದುವು) ಆದರೆ ಅವೆಲ್ಲಕ್ಕೂ ಈ ಸಂದರ್ಭದಲ್ಲಿ ನಾನು ಕೆಲವು ವಿಷಯ ಸ್ಪಷ್ಟ ಪಡಿಸಲು ಬಯಸುವೆ.

೧. ನಮಗೆ ರಾಜಕೀಯ ಕ್ಷೇತ್ರ ಇಷ್ಟವಿಲ್ಲ. ಅಂತಹ ಪತ್ರಿಕೆ ತರುವ ವಿಚಾರ ನಮಗಿಲ್ಲ. ಈಗಾಗಲೇ ಅಂತಹ ಕ್ಷೇತ್ರದಲ್ಲಿ ಕೆಲಸ ಮಾಡುವ ಪತ್ರಿಕೆ ಇವೆ. ಅವುಗಳ ಉಪಯೋಗ ಪಡೆಯಿರಿ.

೨. ಪತ್ರಿಕೆಗೆ ಯಾರ ಬಗ್ಗೆಯು ವೈಯಕ್ತಿಕ ದ್ವೇಷವಿಲ್ಲ. ಪಕ್ಷಪಾತವಿಲ್ಲ. ನಿಷ್ಕಾರಣ ದ್ವೇಷ-ಸಕಾರಣ ಪ್ರೀತಿಯನ್ನು ನಾವು ಮೆಚ್ಚುವದಿಲ್ಲ. ಪತ್ರಿಕೆ ಈ ಒಂದು ವರ್ಷದಲ್ಲಿ ಅಂತಹ ಯಾವ ಬರಹವನ್ನು ಪ್ರಕಟಿಸಿಲ್ಲ. ಎಲ್ಲರ ಬಗ್ಗೆಯು ನಮಗೆ ಗೌರವವಿದೆ. ಈಗ ನಾವು ಯಾರನ್ನು ದ್ವೇಷಿಸುವದಿಲ್ಲ, ಹಾಗೇ ಅನಗತ್ಯವಾಗಿ ಯಾರನ್ನು ತಬ್ಬಿಕೊಳ್ಳುವದಿಲ್ಲ.

೩. ಸ್ವಾಮಿ, ನಮಗ ಪತ್ರಿಕೆ ನಡೆಸುವದೇ ಭಾರವಾಗಿದೆ. ಇನ್ನೂ ಪ್ರಕಾಶನ ಸಂಸ್ಥೆಯಾಗಿ ಇತರರ ಪುಸ್ತಕ ಪ್ರಕಟಿಸುವ ಶಕ್ತಿ ನಮಗಿಲ್ಲ. ನಮ್ಮ ಪುಸ್ತಕ ಪ್ರಕಟಿಸಲೇ ನಾವು ನಮ್ಮ ಅಮೂಲ್ಯ ಉಳಿತಾಯದ ಹಣದಿಂದ ಹಾಗು ಒಮ್ಮೊಮ್ಮೆ ಸಾಲ ಮಾಡಿ ಪ್ರಕಟಿಸುತ್ತಿದ್ದೇವೆ. ಹಾಗಾಗಿ ನಾವು ಒಪ್ಪಲಿಲ್ಲವೆಂದು ನಮ್ಮನ್ನು ದ್ವೇಷಿಸಬೇಡಿ, ಅಸೂಯೆಯನ್ನು ಪಡಬೇಡಿ. ನಮ್ಮ ಸಮಸ್ಯೆ ಅರ್ಥ ಮಾಡಿಕೊಳ್ಳಲುಯತ್ನಿಸಿ, ಅರ್ಥ ಮಾಡಿ ಕೊಳ್ಳುವ ಶಕ್ತಿ ಇಲ್ಲವಾದರೆ ನಿಮ್ಮ ಪಾಡಿಗೆ ನೀವಿರಿ.

ಕೆಲವರಿಗೆ ಪತ್ರಿಕೆಯನ್ನು 'ಗೌರವ'ದಿಂದ ಕಳಿಸುತ್ತೇವೆ. ಅಂತಹವರಿಗೆಲ್ಲ ನಮ್ಮ ಮೇಲಿನ ಮಾತುಗಳು ಮುಜುಗರ ತಾರದಿರಲಿ. ಅವರಿಗೆ ನಾವಾಗಿ ಗೌರವದಿಂದ ಕಳಿಸುತ್ತೇವೆ. ತಮ್ಮ ಅಮೂಲ್ಯ ಸಲಹೆ, ಪ್ರೋತ್ಸಾಹ, ಯುವ ಬರಹಗಾರರಿಗೆ ಉಪಯುಕ್ತವಾಗುವ ಲೇಖನ, ಸಂಪಾದಕ್ಕೆ ನೀವು ಇದನ್ನು ಧಾರಾಳವಾಗಿ ನಿಸ್ಸಂಕೋಚವಾಗಿ ಬಳಸಿಕೊಳ್ಳಬೇಕೆಂದು ವಿನಂತಿಸುತ್ತಾ-ಎಲ್ಲರಿಗೂ ವಂದಿಸಿ ಮುಗಿಸುವೆ.

ಶಶಿ

# ಕನ್ನಡಿಗರು ಮತ್ತು ಕನ್ನಡಾಭಿಮಾನ

● ಡಾ|| ಸಂಜೀವಶೆಟ್ಟಿ

ಸಮಗ್ರ ಕನ್ನಡ ನಾಡು ನುಡಿಯ ಸರ್ವತೋಮುಖ ಅಭಿವೃದ್ಧಿಗೆ 'ಕಾಯಾವಾಚಾ ಮನಸಾ' ಸಮರ್ಪಣಭಾವದಿಂದ ಅಹರ್ನಿಶಿ ಕನ್ನಡದ ಕೆಲಸದಲ್ಲಿ ಸದಭಿಮಾನದಿಂದ ಕರ್ತವ್ಯ ನಿಷ್ಠರಾಗಿ ಪ್ರಾಮಾಣಿಕವಾಗಿ ತೊಡಗಿದ್ದು ಇಂದು ಅಮರ ಚೇತನರೆನಿಸಿರುವ ವಿಭೂತಿ ಪುರುಷರು, ಮಹಾನಚೇತನರು, ದಾರ್ಶನಿಕರು ರಾಜರು ರಾಜಕಾರಣಿಗಳು ವಿಭಿನ್ನ ಕ್ಷೇತ್ರಗಳಲ್ಲಿಯ ಕನ್ನಡದ ಕೆಲಸಗಾರರು, ಸಾಹಿತಿ ಕಲಾವಿದರು, ಕವಿಗಳು ಪ್ರಾತಃಸ್ಮರಣೀಯರಾಗಿರುವರೆಂಬುದು ಐತಿಹಾಸಿಕ ಸತ್ಯ; ಅವರ ತ್ಯಾಗ, ಬಲಿದಾನ ಹೋರಾಟಗಳ ಪ್ರತಿಫಲವೇ ಇಂದಿನ ಕರ್ನಾಟಕದ ಏಕೀಕೃತ ಸ್ವರೂಪ; ಅಖಂಡ ಕರ್ನಾಟಕ: ಇನ್ನೂ ಅಚ್ಚಕನ್ನಡ ಪ್ರದೇಶಗಳು ಪರಕೀಯವಾಗಿರುವುದು ಕನ್ನಡಿಗರ ದೌರ್ಬಲ್ಯ, ಕನ್ನಡಿಗರಲ್ಲಿಯ ದೌರ್ಬಲ್ಯಗಳೇ ಕನ್ನಡಿಗರ ಪಾಲಿಗೆ ಸಮಸ್ಯೆಗಳನ್ನುಂಟು ಮಾಡಿವೆಯೆಂಬುದು ತರ್ಕಾತೀತ, ವಿಷಮತೆಗಳ ನಡುವೆಯೂ ಕೆಚ್ಚೆದೆಯಿಂದ ಕನ್ನಡ ನಾಡು ನುಡಿಗಾಗಿ ಜೀವನವನ್ನೇ ತೆತ್ತ ಕನ್ನಡ ಸುಪುತ್ರರ ಕಾಯಕಗಳನ್ನು ಅರಿತಾಗ ಅಭಿಮಾನದ ಜ್ಯೋತಿ ಅಂತರಂಗದಲ್ಲಿ ಪ್ರಜ್ವಲಿಸುವಂತಿದೆ. ಅವರುಗಳು ಉರಿಸಿರುವ ನಂದಾದೀಪಗಳ ಬೆಳಕಿನಲ್ಲಿ ಕನ್ನಡದ ಎಂಟೆದೆಯ ಬಂಟರಾಗಿ, ಬಲ್ಲವರಾಗಿ ಬಾಳುವ ಕನ್ನಡ ಪ್ರಜ್ಞೆಯು ಕನ್ನಡಿಗರಾಗಿ ಬಾಳುವ ಪ್ರಜ್ಞೆ ಪ್ರತಿಯೊಬ್ಬ ಕನ್ನಡಿಗನಲ್ಲಿರಬೇಕು.

ಕವಿರಾಜಮಾರ್ಗಕಾರನು "ಸುಭಟರ್ಕಳ್, ಕವಿಗಳ್, ಸುಪ್ರಭುಗಳ್ ಚೆಲ್ವರ್ಕಭಿಜನರ್ಕಳ್ ಗುಣಿಗಳ್ ಅಭಿಮಾನಿಗಳತ್ಯುಗ್ರರ ಗಂಭೀರಚಿತ್ತರ ವಿವೇಕಿಗಳ ನಾಡವರ್ಗಳ" ಎಂದು ಸಾವಿರ ವರ್ಷಗಳ ಹಿಂದೆ, ಮುಕ್ತಕಂಠದಿಂದ ಹಾಡಿ ಅಂದಿನ ಕನ್ನಡಿಗರ ವ್ಯಕ್ತಿತ್ವದ ವಿವಿಧ ಮುಖಗಳನ್ನು ಎತ್ತಿ ತೋರಿಸುವಲ್ಲಿ, ಗುಣದಾನ ಮಾಡಿರುವ ರೀತಿ, ಅಭಿಮಾನಾಸ್ಪದವಾದುದು, ಆ ಹಿರಿಯರ ಗೊಮ್ಮಟ ವ್ಯಕ್ತಿತ್ವದ ಹಿರಿಮೆಯೊಡನೆ ದಿವ್ಯವೂ ಭವ್ಯವೂ ಆದರ್ಶವೆನಿಸುವಂತೆ ಅಭಿವ್ಯಕ್ತಿಗೊಂಡಿರುವ ಉಕ್ತಿಗಳು ಕನ್ನಡಿಗರಿಗೆ ಸರ್ವಕಾಲಿಕ ಅಮರ ಸಂದೇಶದ ನುಡಿಮುತ್ತುಗಳಾಗಿವೆ.

ಕನ್ನಡನಾಡು "ಕಾವೇರಿಯಿಂದ ಗೋದಾವರಿ"ವರೆಗೆ ಹರಡಿತ್ತು. ಆದರೆ ಈ ವಿಸ್ತೀರ್ಣತೆ ಮುಂದೇಕೆ ಕ್ಷೀಣಿಸಿತು? ಐತಿಹಾಸಿಕ ಕರ್ನಾಟಕದ ಭೂಪ್ರದೇಶಗಳನ್ನು ಪ್ರಸುತ್ತ ಕರ್ನಾಟಕದ ನೆಲದ ವಿಸ್ತಾರವನ್ನು ಗಮನಿಸಿದಾಗ ಕರ್ನಾಟಕ

ಕಳಕೊಂಡ ಮಣ್ಣಿನಂಶದರಿವು ಕನ್ನಡದ ಮಣ್ಣಿನ ಮಕ್ಕಳಿಗೆ ತಿಳಿಯದೇ ಹೋದೀತೆ? ಕನ್ನಡಿಗರಲ್ಲಿಯ ಭಾಷಾಭಿಮಾನವೇ ಕನ್ನಡ ನಾಡಿನ ವಿಸ್ತೀರ್ಣತೆಯನ್ನು ಕಳೆದು ಕೊಳ್ಳುವಂತೆ ಮಾಡಿದೆ ಎನ್ನುವುದನ್ನು ಪ್ರಾಮಾಣಿಕವಾಗಿ ಅರ್ಥಮಾಡಿಕೊಳ್ಳ ಬಹುದಾಗಿದೆ.

ತಾಯ್ನುಡಿಯ ಬಗ್ಗೆ ಮನಸದುಂಬಿ ಝೇಂಕರಿಸಿದ ಆತ್ಮಾಭಿಮಾನದ ಕವಿವ ರೇಣ್ಯರ ಸಹಸ್ರಾರು ದೀಪಗಳ ನಂದಾದೀಪಗಳಂತೆ ಬೆಳಗುತ್ತಿರುವುದು, ಕನ್ನಡದ ಭಾಗ್ಯ. ಅಂತೆಯೇ "ಕನ್ನಡಂ ಕತ್ತುರಿಯಲ್ತೆ"...."ಮರಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು ನಂದನದೋಳ್ ಬನವಾಸಿದೇಶದೊಳ್" ಕರ್ನಾಟಕ ಎಂಬುದು ಬರಿಯ ಹೆಸರಲ್ಲ, ಮಂತ್ರ ಕಣಾ, ಶಕ್ತಿ ಕಣಾ, ದೇವಿಕಣಾ, "ತಾಯಿ ಬಾರ ಮೊಗವತೋರ" ಕನ್ನಡಿಗರ ಮಾತೆಯೆ, ಹರಸು ತಾಯೆ ಸುತರ ಕಾಯೆ ನಮ್ಮ ಜನ್ಮದಾತೆಯೆ, ನನ್ನದು ಈ ಕನ್ನಡ ನಾಡು ಅದು ನನ್ನನೆಂತೊ ಹಾಗೆಯೇ ನಿನ್ನದೂ ಒಂದೇಒಂದೇಒಂದೇ, ಕರ್ನಾಟಕ ಒಂದೇ ಇಲ್ಲಿರುವ ಜನಮನ ಭಾಷೆಯು ಕನ್ನಡವದು ಒಂದೇ ಒಂದೇ ಜನವೂ ಮನವೂ ಕನ್ನಡಿಗರು ಎಂದೇ, ಕುಲವೊಂದೇ ಸ್ಥಳವೊಂದೇ ನೀತಿಯು ನೆಲವೊಂದೇ. ಹೀಗೆನ್ನದ ಹೆರವರು ಅವರಿದ್ದರು ಒಂದೇ,ಇರದಿದ್ದರು ಒಂದೇ ಎಲ್ಲಾದರೂ ಇರು, ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು ಎಂದು ಕನ್ನಡದ ದೀಕ್ಷೆ ತೊಡುವಂತೆ ಸಾರಿದ ಕವಿವಾಣಿಗಳ ಅಮರ ಸಂದೇಶಗಳಾಗಿವೆ. ಉಸಿರಿನಷ್ಟೇ ಸಾಕ್ಷಿಯಾಗಿರಬಲ್ಲ ಅಂತರಂಗದ ಧ್ವನಿಗಳಾಗಿವೆ, ಕನ್ನಡದ ಮಂತ್ರ ಘೋಷಣೆಗಳಾಗಿವೆ.

(ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–583 211)

---

## ಪ್ರಾಚೀನ ಕರ್ನಾಟಕದ ಬೌದ್ಧ ಕ್ಷೇತ್ರ-ಸನ್ನತಿ

● ಡಾ॥ ವಿ. ಜಿ. ಪೂಜಾರ

ಕರ್ನಾಟಕದ ಉತ್ತರ ತುದಿಯಲ್ಲಿರುವ ಈಗಿನ ಹೈದ್ರಾಬಾದ ಕರ್ನಾಟಕ ಪ್ರದೇಶ ಐತಿಹಾಸಿಕ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ತುಂಬ ಗಮನಾರ್ಹ ವಾದುದು. ಜೈನರ ಕಾವ್ಯದ, ಶರಣರ ವಚನದ, ದಾಸರ ಹಾಡಿನ ಬೀಡಾದ ಈ ಪ್ರದೇಶವು ಶಿಲ್ಪಕಲೆ, ಶಾಸನ, ಐತಿಹ್ಯ, ವಿದ್ಯಾಕೇಂದ್ರ ಹಾಗೂ ಧಾರ್ಮಿಕ ಕೇಂದ್ರ ಗಳಿಗೆ ಹೆಸರುವಾಸಿಯಾಗಿತ್ತು. ರಾಷ್ಟ್ರಕೂಟ ದೊರೆ ನೃಪತುಂಗನ ರಾಜಧಾನಿ ಮಳಖೇಡ ಇದ್ದುದು ಈ ಪ್ರದೇಶದ ಗುಲಬರ್ಗಾ ಜಿಲ್ಲೆಯಲ್ಲಿಯೇ ಇದೇ ಜಿಲ್ಲೆ ಯಲ್ಲಿದ್ದ ನಾಗಾಯಿ ಮತ್ತು ಸನ್ನತಿ ಪ್ರಾಚೀನ ಕಾಲದಲ್ಲಿ ತುಂಬ ಪ್ರಸಿದ್ಧ ಪಡೆದಿದ್ದ ಘಟಿಕಾಸ್ಥಾನ ಹಾಗೂ ಬೌದ್ಧ ಕೇಂದ್ರಗಳಾಗಿದ್ದವು.

"ಸನ್ನತಿ" ಗುಲಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೂಕಿನಲ್ಲಿ ಇರುವ ಒಂದು ಸಣ್ಣ ಗ್ರಾಮ. ಇದು ಗುಲಬರ್ಗಾದಿಂದ ೮೦ ಕಿಲೋಮೀಟರ ದೂರದಲ್ಲಿದ್ದು, ಭೀಮಾ ನದಿಯ ಎಡ ದಡದಲ್ಲಿದೆ. ಈ ಗ್ರಾಮ ಕ್ರಿಸ್ತಶಕದ ಮೊದಲ ಅಥವಾ ಎರಡನೇ ಶತಕದಲ್ಲಿ ಬೆಳವಣಿಗೆಗೊಂಡ ಒಂದು ದೊಡ್ಡ ಬೌದ್ಧ ಕೇಂದ್ರವಾಗಿತ್ತು. ಆಗ ಕರ್ನಾಟಕದಲ್ಲಿದ್ದ ಬೌದ್ಧ ಕೇಂದ್ರಗಳೆಂದರೆ ಎರಡೇ ಇದೊಂದು, ಇನ್ನೊಂದು ಬನವಾಸಿ ಆಗ ಕರ್ನಾಟಕವನ್ನು ಶಾತವಾಹನರು ಆಳುತ್ತಿದ್ದರು. ಇವರು ಬೌದ್ಧಪರ ನಿಲುವು ಉಳ್ಳವರಾಗಿದ್ದು, ಬೌದ್ಧ ಧರ್ಮವನ್ನು ಪುನಃ ನಮ್ಮ ದೇಶದಲ್ಲಿ ಪ್ರಚಾರ ಮಾಡುವ ಉದ್ದೇಶ ಹೊಂದಿದ್ದರು. ಸನ್ನತಿಯನ್ನು ಇವರು ತಮ್ಮ ಆಡಳಿತದ ಕೇಂದ್ರ ಸ್ಥಾನ ಮಾಡಿಕೊಂಡಿದ್ದರು. ಇದನ್ನು ಇವರು ಬೌದ್ಧ ಪರಂಪರೆಯ ಮಹಾಯಾನ ಶಾಖೆಯ ಆರಾಧನಾ ಕೇಂದ್ರವಾಗಿ ಬೆಳೆಸಿದರು.

ಕ್ರಿ. ಶ. ಪೂರ್ವ ೧ನೇ ಶತಮಾನದಿಂದ ೩ನೇ ಶತಮಾನದೊಳಗಾಗಿ ಸನ್ನತಿ ಜೀರ್ಣಾವಸ್ಥೆಗೆ ಬಂದಿದೆ. ಇಲ್ಲಿ ಇಂದು ಬೌದ್ಧ ಧರ್ಮದ ಅನೇಕ ಸ್ಮಾರಕಗಳು, ಅವಶೇಷಗಳು ಬನವಾಸಿಗಿಂತಲೂ ಹೆಚ್ಚಾಗಿ ಸಿಗುತ್ತವೆ. ಈ ಊರ ಮುಂದೆ ಹರಿಯುತ್ತಿರುವ ಭೀಮಾ ನದಿಯ ಎರಡೂ ದಂಡೆಗಳುದ್ದಕ್ಕೂ ಎರಡು ಮೂರು ಮೈಲುಗಳವರೆಗೆ ಅಂದರೆ ಕಣಗನಹಳ್ಳಿಯವರೆಗೂ ಬೌದ್ಧ ಸ್ಮಾರಕಗಳು ಚೆಲ್ಲಿಕೊಂಡಿದ್ದನ್ನು ಕಾಣಬಹುದು.

ಸನ್ನತಿಯಲ್ಲಿ ಎರಡು ಬೌದ್ಧ ಸ್ತೂಪಗಳಿದ್ದವು ಎಂಬ ಉಲ್ಲೇಖವಿದ್ದರೂ ಒಂದು ಮಾತ್ರ ಈಗ ಉಪಲಬ್ಧವಾಗಿದೆ. ಇದರಲ್ಲಿ ಸ್ಥಾಪಿಸಿರಬಹುದಾದ ಪವಿತ್ರ ಅಸ್ತಿಗಳಿಗೆ ಮೀಸಲಾಗಿದ್ದ ಕಲ್ಲಿನ ಕರಂಡಕವೂ ಸಿಕ್ಕಿದೆ. ಬುದ್ಧನ ಜನನ ಪರಿತ್ಯಾಗ, ಸಂಭೋಧಿ, ಧರ್ಮ ಪ್ರವಚನ ಮತ್ತು ನಿವಾರಣಗಳೆಂಬ ಐದು ಘಟನೆಗಳನ್ನು ಸಂಕೇತಿಸುವ ಐದು ಆಯಕ ಸ್ಥಂಬಗಳು ದೊರೆತಿವೆ. ಇವುಗಳಲ್ಲಿ ಬುದ್ಧನ ಅನುಯಾಯಿಗಳ ಕೆತ್ತನೆಯೂ ಇದೆ. ಇಲ್ಲಿ ನೂರಕ್ಕಿಂತ ಹೆಚ್ಚು ಶಿಲ್ಪಕಲಾಕೃತಿಗಳು ಸಿಕ್ಕಿವೆ. ಇವೆಲ್ಲ ಅಲ್ಲಿಯೇ ಸ್ಥಳೀಯವಾಗಿ ಸಿಕ್ಕುವ ಸುಣ್ಣದ ಕಲ್ಲಿನಲ್ಲಿ ಕಟಿಯಲ್ಪಟ್ಟಿದ್ದು, ಬುದ್ಧನ ಜಾತಕ ಕಥೆಗಳು ಹಾಗೂ ಆತನ ಜೀವನವನ್ನು ಸಾಂಕೇತಿಕವಾಗಿ ಒಳಗೊಂಡ ಕಲಾಕೃತಿಗಳಾಗಿವೆ. ಇವು ಆಂಧ್ರದ ಅಮರಾವತಿಯಲ್ಲಿರುವ ಸಾಂಪ್ರದಾಯಿಕ ಕಲಾಕೃತಿಗಳಂತೆ ಇರದೆ, ಇಲ್ಲಿನ ಸ್ಥಳೀಯ ಜಾನಪದ ಶೈಲಿಯನ್ನು ಒಳಗೊಂಡಿವೆ. ಸ್ತೂಪವಲ್ಲಿದೆ ಬುದ್ಧನ ಪಾದ, ಬೋಧಿ ಗಿಡ, ತ್ರಿರತ್ನ ಇತ್ಯಾದಿ ಚಿತ್ರಗಳು—ಕಲ್ಲು ಚಪ್ಪಡಿ, ದಿಲಿಕ ಕ್ಯಾಸ್ಕೆಟ ಸ್ಮಾರಕ, ಕೋಟೆಗೋಡೆ ಮುಂತಾದವು ಸಿಕ್ಕಿದ್ದು, ಇವೆಲ್ಲ ಶಾತವಾಹನರ ಕಾಲಕ್ಕೆ ಸಂಬಂಧಿಸಿದವು ಎಂದು ಗುರುತಿಸಲಾಗಿದೆ.

ಬೌದ್ಧ ವಾಸ್ತುವಿನಲ್ಲಿ ವೈಶಿಷ್ಟ್ಯ ಪೂರ್ಣವೆನ್ನಿಸುವ ಯಕ್ಷ ವಿಗ್ರಹವೂ (ಸ್ಥೂಲೋದರ ಕಟಿವಸ್ತ್ರ ಕುಬ್ಜಾಕಾರ) ಇಲ್ಲಿ ದೊರೆತಿದೆ. ಚಂದ್ರಲಾಂಬಾ ಅಥವಾ ಚಂದ್ರಲಾ ಪರಮೇಶ್ವರಿ ದೇವಾಲಯವೂ ಇಲ್ಲಿಯೇ ನದಿಯ ದಂಡೆಯ ಮೇಲಿದೆ. ಈ ದೇವಾಲಯವು ಬೌದ್ಧದ ಕಾಲದಲ್ಲಿ ಬೌದ್ಧರ ಸ್ಥಾನವಾಗಿಯೂ, ಶೈವ-ಶಾಕ್ತರ ಕಾಲದಲ್ಲಿ ಪಾರ್ವತಿ–ಮಹಾಕಾಳಿಯ ಸ್ಥಾನವಾಗಿಯೂ ವೈಷ್ಣವರಿಗೆ ಶ್ರೀರಾಮ-ಸರಸ್ವತಿಯ ಸ್ಥಾನವಾಗಿಯೂ ಮಾರ್ಪಾಟು ಹೊಂದುತ್ತ ಬಂದುದನ್ನರಿಯಬಹುದು. ಈಗ ಇದೊಂದು ಯಾತ್ರಾಸ್ಥಳವಾಗಿದೆ.

ಸನ್ನತಿಯಲ್ಲಿ ಪ್ರಾಚೀನ ಕಾಲದ ಗುಂಡು, ಮಣಿ, ನಾಣ್ಯ ಹಾಗೂ ಶಾಸನಗಳು ಸಿಕ್ಕಿವೆ. ಸದ್ಯ ಐವತ್ತಕ್ಕೂ ಹೆಚ್ಚು ಶಾಸನಗಳು ಸಿಕ್ಕಿದ್ದು ಇವೆಲ್ಲ ಪ್ರಾಕೃತ ಭಾಷೆಯಲ್ಲಿದ್ದು, ಬ್ರಾಹ್ಮಿಲಿಪಿಯಲ್ಲಿ ಬರೆಯಲ್ಪಟ್ಟಿವೆ. ಒಂದು ಅಥವಾ ಎರಡು ಸಾಲುಗಳನ್ನೊಳಗೊಂಡ ಇವುಗಳಲ್ಲಿ ಬೌದ್ಧ ಸಂಘಾರಾಮಗಳಿಗೆ, ಸ್ತೂಪ ವಿಹಾರಗಳಿಗೆ ದಾನವಿತ್ತ ವಿವರಗಳಿವೆ. ಕೆಲ ಶಾಸನಗಳಲ್ಲಿ ಸಾಮಾನ್ಯ ಜನರೂ ಕೂಡ ಬೌದ್ಧ ಧರ್ಮಾವಲಂಬಿಗಳಾಗಿದ್ದುದರ ಉಲ್ಲೇಖವಿದೆ. ಅನೇಕ ಸ್ತ್ರೀಯರು ಪುರುಷರಿಗೆ ಸಮಾನವಾಗಿ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಮುಕ್ತವಾಗಿ ಭಾಗವಹಿಸಿದ್ದು ಇವುಗಳಲ್ಲಿ ಉಲ್ಲೇಖಗೊಂಡಿದೆ. ಕೆಲವು ಮರಣ ಶಾಸನಗಳೂ ಇವೆ. ಈಗ ಇವುಗಳಲ್ಲಿ ಕೆಲವನ್ನು ರಾಜ್ಯ ಸರಕಾರದ ಗುಲಬರ್ಗಾ ವಸ್ತು ಸಂಗ್ರಹಾಲಯದಲ್ಲಿ ಇರಿಸಲಾಗಿದೆ. ಭಾರತೀಯ ಶಾಸನಗಳ ವಾರ್ಷಿಕ ವರದಿಗಳಲ್ಲಿ (೧೯೬೬–೬೭ ಹಾಗೂ ೧೯೬೮–೬೯) ಇವನ್ನು ದಾಖಲಿಸಲಾಗಿದೆ. ಲಿಪಿ ಶಾಸ್ತ್ರದ ದೃಷ್ಟಿಯಿಂದ ಇವುಗಳ ಕಾಲವನ್ನು ಕ್ರಿ. ಶ. ೨ನೇ ಶತಮಾನವೆಂದು ಗುರುತಿಸಲಾಗಿದೆ.

ಬೌದ್ಧಧರ್ಮದ ಅವಶೇಷಗಳು ಹಾಗೂ ಬುದ್ಧನ ಜೀವನಕ್ಕೆ ಸಂಬಂಧಿಸಿದ ಅಮೂಲ್ಯ ಸ್ಮಾರಕಗಳನ್ನು ಒಳಗೊಂಡ ಸನ್ನತಿಯು ಇಂದು ಸಂಶೋಧಕರಿಗೆ, ಇತಿಹಾಸ ತಜ್ಞರಿಗೆ ತುಂಬಿದ ಗಣಿಯಾಗಿದೆ, ಕನ್ಯೆ ನೆಲವಾಗಿದೆ. ಒಟ್ಟಿನಲಿ, ಸನ್ನತಿಯು ನಮ್ಮ ರಾಜ್ಯದ ಅನೇಕ ಶಿಲ್ಪಕಲೆಯ ಹೆಮ್ಮೆಯ ನೆಲಗಳಲ್ಲಿ ಒಂದಾಗಿದೆ. (ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೫೮೩ ೨೧೧.)

# ಅಯೋಧ್ಯೆ ದುರಂತ : ಕನ್ನಡ ಸಣ್ಣ ಪತ್ರಿಕೆಗಳ ಪ್ರತಿಕ್ರಿಯೆ

**ಬಾಪುಗೌಡ ಶಾಡಲಗೇರಿ**

(ಗೆಳೆಯ ದಿ. ಬಾಪುಗೌಡ ಶಾಡಲಗೇರಿಯವರ ಕೊನೆಯ ಲೇಖನವಿದು. ಪತ್ರಿಕೆ ಈ ರೀತಿ ಸ್ಪಂದಿಸುವ ಹೋರಾಟದ ಮನಸ್ಸುಳ್ಳ ಒಬ್ಬ ಗೆಳೆಯನನ್ನು ಕಳೆದುಕೊಂಡ ನೋವಿನಲ್ಲೇ ಈ ಲೇಖನ ಪ್ರಕಟಿಸುತ್ತಿದೆ.)

ಸಂ–

ಬಹುಕಾಲದ ನಂತರ ದೇಶ ಮತ್ತೆ ಹಿಂಸೆಗೆ ತುತ್ತಾಯಿತು. ಸಾವಕಾಶವಾಗಿ ಮುಂದಿಡುತ್ತಿದ್ದ ಹೆಜ್ಜೆಗಳು ಬೆಚ್ಚಿ ಹಿಂದೆ ಹಿಂದೆ ಸರಿಯಬೇಕಾದವು. ನಸಿನಸಿಯಾಗಿದ್ದ ಬೆಂಕಿ ಮತ ನಿಷ್ಠುರ ಪದುಸಿರಿಗೆ ಅಂದು ಜ್ವಾಲೆಯಾಗಿ ಭುಗಿಲೆದ್ದಿತು. ಅದರ ಪರಿಣಾಮವಾಗಿ ಹೆಜ್ಜೆ ಊರಿದಲ್ಲೆಲ್ಲ ರಕ್ತದ ಸಾರಣೆಯಾಗಿತ್ತು. ಅಸ್ತವ್ಯಸ್ತವಾಗಿ ಬಿದ್ದ ಅನಾಥ ಹೆಣಗಳು ಭೀಭತ್ಸ ಚಿತ್ರಗಳಂತೆ ಕಾಣುತ್ತಿತ್ತು. ಹಿಂಸೆ, ಕೊಲೆ, ಅತ್ಯಾಚಾರ, ಲೂಟಿಗಳಿಗೆ ಬಲಿಯಾದ ಅಮಾಯಕರ ಅಳಲು ಕೇಳಲಂತು ಇಡೀ ದೇಶದಲ್ಲಿ ನೆಮ್ಮದಿಯ ಕಿವಿಗಳೇ ಇರಲಿಲ್ಲ. ಇದು ಯಾವುದೋ ಕಥೆಯ ಪೀಠಿಕೆಯಲ್ಲ, ೬-೧೨-೯೨ರ ಅಯೋಧ್ಯೆ ದುರಂತದ ತರುವಾಯದ ಸ್ಥಿತಿಗತಿಗಳು.

ಬಾಬರಿ ಮಸೀದಿ ಕರಸೇವಕರಿಂದ ನೆಲ ಸಮವಾದ ಸುದ್ದಿಯನ್ನು ಸಮೂಹ ಮಾಧ್ಯಮಗಳು ಮಿಂಚಿನಂತೆ ಬಿತ್ತರಿಸತೊಡಗಿದ ಮರುಕ್ಷಣದಿಂದಲೇ ದೇಶದ ಪರಿಸ್ಥಿತಿ ಎಂದಿಲ್ಲದ ಗಂಭೀರ ಸ್ವರೂಪ ತಾಳಿತು. ಮತಾಂಧರ ಆಕ್ರೋಶ ಸಹನೆ ಮೀರಿ ಕಟ್ಟೆ ಒಡೆದು ನುಗ್ಗಿ ಬಂತು. ಅಮಾಯಕ ಜನ ಪೋಲೀಸರ ಗುಂಡಿಗೆ, ಮತ ನಿಷ್ಠುರ ಕ್ರೌರ್ಯಕ್ಕೆ ಬಲಿಯಾಗಿ ಜೀವ ತೆತ್ತರು. ದುರಂತಕ್ಕೆ ಕಾರಣವಾದ ಎರಡು ಕೋಮಿನ ನಡುವೆ ಪರಸ್ಪರ ಹಲ್ಲೆ ನಡೆಯಿತು. ಕೈ ಮೀರಿದ ಪರಿಸ್ಥಿತಿಯನ್ನು ಹತೋಟಿಗೆ ತರಲು ಸೈನ್ಯ ಸಾಲುಗಟ್ಟಿ ನಿಂತಿತು. ದಾಂಧಲಿಗರ ಮೇಲೆ ನಿರ್ದಾಕ್ಷಿಣ್ಯದ ಗುಂಡಿನ ಮಳೆ. ಅದರಲ್ಲಿ ಸತ್ತವರು ಸಾವಿರಕ್ಕೂ ಮೇಲು, ವಿಪರ್ಯಾಸವೆಂದರೆ ಅವರಲ್ಲಿ ನಿರಪರಾಧಿಗಳದೇ ಬಹುಪಾಲು.

ಮಸೀದಿ ಕೆಡವಿದ ಸುದ್ದಿ ಕೇಳಿದ ಪಿ. ವ್ಹಿ. ನರಸಿಂಹರಾಯರ ಕಾಲುಗಳ ನರಬಲ ಕುಗ್ಗಿ ಕುಸಿಯುವಂತಾಯಿತು. ಪರಿಸ್ಥಿತಿ ಇಷ್ಟು ವಿಕೋಪಕ್ಕೆ ಹೋಗಲಿಕ್ಕಿಲ್ಲ ಎಂಬ ಅವರ ಉದಾಸೀನತೆ ದೇಶಕ್ಕೆ ಮುಳ್ಳುವಾಯಿತು. ಎಲ್ಲೆಲ್ಲೂ ಕೊಲೆ, ಅತ್ಯಾಚಾರ, ಲೂಟಿಯ ವರದಿಗಳು ಬಂದಾಗ ದೀರ್ಘ ನಿದ್ರೆಯಿಂದ ಎದ್ದ

ಸದ್ಯದಂತೆ ಪತ್ರಿಸಿ ತರ್ಕಾರಿಯು ಕ್ರಮಗಳನ್ನು ಕೈಗೊಳ್ಳಲು ಆರಂಭಿಸಿದರು. ೧೪೪ನೇ ಕಲಂನ್ನು ಜಾರಿ ಮಾಡಿದರು. ಶಾಲೆ ಕಾಲೇಜುಗಳಿಗೆ ರಜೆ ಘೋಷಿಸಲಾಯಿತು. ಆಯಕಟ್ಟಿನ ಸ್ಥಳಗಳಿಗೆ ಸೈನ್ಯ ಕಳಿಸಿ ಕಟ್ಟುನಿಟ್ಟಿನ ಭದ್ರತಾ ವ್ಯವಸ್ಥೆ ಮಾಡಲಾಯಿತು. ರಾಜಸ್ಥಾನ, ಮಧ್ಯಪ್ರದೇಶ, ಉತ್ತರಪ್ರದೇಶ ಹಿಮಾಚಲ ಪ್ರದೇಶಗಳ ಬಿ.ಜೆ.ಪಿ. ಸರಕಾರಗಳನ್ನು ವಜಾ ಮಾಡಲಾಯಿತು. ಐದು ಕೋಮು ಸಂಘಟನೆಗಳೆಂದು ಗುರ್ತಿಸಲಾದ ವಿಶ್ವ ಹಿಂದೂ ಪರಿಷತ್, ರಾಷ್ಟ್ರೀಯ ಸ್ವಯಂ ಸೇವಕ ಸಂಘ, ಭಜರಂಗ ದಳ, ಜಮಾತೆ ಇಸ್ಲಾಮಿ, ಇಸ್ಲಾಮಿಕ ಸೇವಕ ಸಂಘಗಳ ಕಛೇರಿಗಳಿಗೆ ಬೀಗ ಮುದ್ರೆ ಹಾಕಿಸಲಾಯಿತು. ಕೇಂದ್ರೀಯ ತನಿಖಾ ದಳಕ್ಕೆ ಸಂಘಟನೆಯ ತನಿಖೆ ನಡೆಸಲು ಆದೇಶಿಸಿದರು. ಸಾಲದೆಂಬಂತೆ ಅವಸರದ ತೀರ್ಮಾನ ತೆಗೆದುಕೊಂಡು ನಾಶಗೊಂಡ ಬಾಬರಿ ಮಸೀದಿಯನ್ನು ಅದೇ ಸ್ಥಳದಲ್ಲಿ ಮತ್ತೆ ನಿರ್ಮಿಸಿ ಕೊಡುವುದಾಗಿ ಭರವಸೆಯನ್ನು ಕೊಟ್ಟರು. ಅಡ್ವಾನಿ, ಜೋಷಿಯವರನು ಬಂಧಿಸಿದರು.

ಇದಕ್ಕೆ ಪ್ರತಿಯಾಗಿ ಡಿಸೆಂಬರ ೭ ರಂದು ವಿರೋಧ ಪಕ್ಷದ ನಾಯಕ ಸ್ಥಾನಕ್ಕೆ ಲಾಲಕೃಷ್ಣ ಅಡ್ವಾನಿಯವರು ರಾಜಿನಾಮೆ ಕೊಟ್ಟರು. ನಾಲ್ಕು ರಾಜ್ಯಗಳಲ್ಲಿದ್ದ ಬಿ.ಜೆ.ಪಿ. ಸರಕಾರ ವಜಾ ಮಾಡಿದ್ದನ್ನು ಸಂವಿಧಾನಾತ್ಮಕ ವಿರೋಧಿ ಕ್ರಮವೆಂದು ಗ್ರಹಿಸಿ ಡಿಸೆಂಬರ ೧೩ ರಿಂದ ೨೦ರ ವರೆಗೆ ಪಕ್ಷದ ವತಿಯಿಂದ ಕರಾಳ ಸಪ್ತಾಹ ಆಚರಿಸಿದರು. ರಾಜ್ಯ ಸಭೆಯಲ್ಲಿ ಡಿಸೆಂಬರ ೧೭ ರಂದು ಸಿಕಂದರ ಭಕ್ತ ಅವರು ಪಕ್ಷದ ವತಿಯಿಂದ ಬೇಶರತ್ ಕ್ಷಮೆಯಾಚನೆ ಮಾಡಿ ಅಯೋಧ್ಯೆಯ ಈ ದುರಂತಕ್ಕೆ ತಮ್ಮ ಪಕ್ಷ (ಬಿ.ಜೆ.ಪಿ.) ಕಾರಣವಾಗಿದೆ ಎಂಬುದನ್ನು ಒಪ್ಪಿಕೊಂಡರು.

ದುರಂತ ಪೂರ್ವದ ಮತ್ತು ತರುವಾಯದ ಈ ಎಲ್ಲ ಘಟನಾವಳಿಗಳನ್ನು ವ್ಯವಸ್ಥಿತವಾಗಿ ಹಾಗೂ ನಿರಂತರವಾಗಿ ಸುದ್ದಿ ಮಾಧ್ಯಮಗಳು ದಣಿವಿಲ್ಲದಂತೆ ಚಿತ್ರಿಸುತ್ತಲೇ ಇದ್ದವು. ವಿಶೇಷ: ಪತ್ರಿಕೆಗಳು ಅಯೋಧ್ಯೆ ಸಮಸ್ಯೆಯ ಬಗೆಗೆ ತಾತ್ಸಾರ ತಾಳಿದ್ದರೆ ಈ ಪರಿಯ ದಟ್ಟವಾದ ಧಾರ್ಮಿಕ ಭಾವೋದ್ವೇಗದ ಮನೋಸ್ಥಿತಿ ನಿರ್ಮಾಣವಾಗುತ್ತಿರಲಿಲ್ಲವೇನೊ. ಆದರೆ ಪತ್ರಿಕೆಗಳ ಆಂತರಿಕ ಪೈಪೋಟಿ ಮತ್ತು ತಮ್ಮ ಅಸ್ತಿತ್ವದ ಕಾರಣಕ್ಕಾಗಿ ಈ ಸಮಸ್ಯೆಗೆ ಅನಿವಾರ್ಯವಾಗಿ ಬಣ್ಣ ಕೊಡಲೇಬೇಕಾಯಿತು. ಬಂಡವಾಳಶಾಹಿಗಳ ವಶದಲ್ಲಿರುವ ದೊಡ್ಡ ಪತ್ರಿಕೆಗಳಿಗೆ ಈ ಸಮಸ್ಯೆಯ ಪ್ರಸಾರದಿಂದ ಸಾಮಾಜಿಕವಾಗಿ, ಮಾನಸಿಕವಾಗಿ ಆಗುವ ದುಷ್ಪರಿಣಾಮಕ್ಕಿಂತ ಬರುವ ಆದಾಯದ ಮೇಲೆಯೇ ಅವುಗಳ ಕಣ್ಣು. ಹೀಗಾಗಿ ನಮ್ಮ ಪತ್ರಿಕೆಗಳಿಗೆ ಸುದ್ದಿ ಸೆನ್ಸಾರ್ ಎಂಬುದೇ ಇಲ್ಲ. ಓದುಗರನ್ನು ರಂಜಿಸುವುದರ

ಕಡೆಗೆ ಅವುಗಳ ಲಕ್ಷ್ಯ. ಈ ದೃಷ್ಟಿಯಿಂದ ದೊಡ್ಡ ಪತ್ರಿಕೆಗಳಿಗಿಂತ ಯಾವುದೇ ಅನನ್ಯತೆಯನ್ನು ಸಣ್ಣ ಪತ್ರಿಕೆಗಳಲ್ಲಿ ಕಾಣಲಾಗದಿದ್ದರೂ ಸಣ್ಣ ಪತ್ರಿಕೆಗಳ ಘೋಷಣೆಗಳು ದೊಡ್ಡ ಪತ್ರಿಕೆಗಳಿಗಿಂತ ಸ್ಪಷ್ಟ. ಹೀಗಾಗಿ ಸಣ್ಣ ಪತ್ರಿಕೆಗಳು ಅಯೋಧ್ಯೆಯ ದುರಂತವನ್ನು ಕಂಡ ಬಗೆ ಹೇಗೆ? ಹಾಗೂ ಪ್ರತಿಕ್ರಿಯಿಸಿದ ರೀತಿ ಎಂಥದ್ದು? ಎಂಬುದರ ಕಡೆಗೆ ಈ ಲೇಖನ ಗಮನ ಹರಿಸುತ್ತದೆ. ನಾಡಿನ ಭಿನ್ನ ಭಾಗಗಳಿಂದ ಹೊರಡುವ ಸಣ್ಣ ಪತ್ರಿಕೆಗಳು ವ್ಯಕ್ತಪಡಿಸಿದ ಅಯೋಧ್ಯೆ ದುರಂತದ ಬಗೆಗಿನ ಅಭಿಪ್ರಾಯಗಳು ಹೀಗಿವೆ.

ಬೆಳಗಾಂವಿಯಿಂದ ಪ್ರಕಟವಾಗುವ "ಹಳ್ಳಿಯ ಸಂದೇಶ" (ಸಂ: ಪಿ. ವಿಜಯಕುಮಾರ) ಪತ್ರಿಕೆಯ ಸಂಪಾದಕೀಯವು ಮಂದಿರ ಪರ ನಿಲುವು ತಾಳುತ್ತ ಈ ದುರಂತಕ್ಕೆ ಬಾಬರ್ ಮತ್ತು ಪಿ. ವ್ಹಿ. ನರಸಿಂಹರಾಯರೇ ಕಾರಣವೆಂದು ನೇರವಾಗಿ ಆರೋಪಿಸುತ್ತದೆ. ಅಯೋಧ್ಯೆಯ ವಿವಾದಗ್ರಸ್ತ ಕಟ್ಟಡ ಮೂಲತಃ ಹಿಂದೂ ದೇವಾಲಯವಿದ್ದು ನಂತರ ಬಾಬರನು ಮಸೀದಿಯಾಗಿ ಪರಿವರ್ತಿಸಿದನೆಂದು ಇತಿಹಾಸದ ಸಂಶೋಧನೆಗಳ ಆಧಾರವನ್ನು ಕೊಡುತ್ತದೆ. ಇಂಥ ಕಟ್ಟಡ ವಿವಾದಕ್ಕೆ ಒಳಗಾದಾಗ "ಮಂದಿರ ಬನಾವೊ- ಮಸ್ಜಿದ್ ಬಚಾವೊ, ಪಿ. ವ್ಹಿ. ನರಸಿಂಹರಾಯರ ಅಡ್ಡಗೋಡೆಯ ಮೇಲಿನ ಈ ದೀಪವೇ ಅಯೋಧ್ಯೆಯ ಅಶಾಂತಿಗೆ ಹಾಗೂ ದೇಶದಲ್ಲಿ ಈಗ ಎದ್ದ ಹಿಂಸಾಚಾರಕ್ಕೆ ಕಾರಣವಾಗಿರುವುದು ನಿಸ್ಸಂಶಯ" ಎಂದು ಟೀಕಿಸಿದೆ.

ಬೆಳಗಾಂವಿಯದೆಯಾದ ಇನ್ನೊಂದು ಸಣ್ಣ ಪತ್ರಿಕೆ 'ಜನಜೀವಾಳ' ವು ಇದಕ್ಕೆ ತದ್ವಿರುದ್ಧವಾದ ಅಭಿಪ್ರಾಯ ನೀಡಿ ಈ ದುರಂತವನ್ನು "ರಕ್ತದೋಕುಳಿಯ ದಿನ"ವೆಂದು ಬಣ್ಣಿಸಿದೆ.

ಹುಬ್ಬಳ್ಳಿಯಿಂದ ಪ್ರಕಟವಾಗುವ 'ನವನಾಡು' (ಸಂ. ಪಾಂಡುರಂಗ ಪಾಟೀಲ) "ಈ ದೇಶಕ್ಕೆ ಸಮಗ್ರತೆ, ಐಕ್ಯತೆ, ಭಾವೈಕ್ಯತೆ, ಸಹಬಾಳ್ವೆ ಅತೀ ಅವಶ್ಯ ....ಇವು ಎಂದು ನಾಶವಾಗುತ್ತವೆಯೋ ಅಂದೇ ಈ ದೇಶವೂ ನಾಶವಾಗುತ್ತದೆ...." ಎಂಬ ಇವರ ಅಭಿಪ್ರಾಯ, ದೇಶದ ಭಿನ್ನ ಸಂಸ್ಕೃತಿಗಳ ಮಧ್ಯೆ ಸಾಧಿಸುವ ಸಂಬಂಧ ಏರ್ಪಡದೆ ಮುನ್ನಡೆ ಸಾಧ್ಯವಿಲ್ಲ ಎಂಬುದಾಗಿದೆ. ಅಯೋಧ್ಯೆ ದುರಂತದ ಕುರಿತು ವಿಚಾರ ವ್ಯಕ್ತಪಡಿಸುತ "ಕರಸೇವೆಯಿಂದ ಬಾಬರಿ ಮಸೀದಿಗೆ ಆದ ಧಕ್ಕೆಯಿಂದ ಜಗತ್ತಿನ ಜನಾಂಗ ಈ ದೇಶದ ಮುಸ್ಲಿಂ ಜನಾಂಗಕ್ಕೆ ಅನುಕಂಪ ತೋರಿಸುವಂತಾಯಿತು. ಈ ಘಟನೆ ಈ ದೇಶದ ಇತಿಹಾಸದಲ್ಲಿ ಮಾಯದೇ ಉಳಿದ ಕಲೆಯಾಗಿದೆ" ಎಂದು ವಿಷಾದಿಸಿದೆ.

# "ಕಥೆ ಕೇಳು ಗೆಳೆಯಾ" (ಕಥಾ ಸಂಕಲನ)

● ರಾಜಶೇಖರ ಹತಗುಂದಾ

ಲೇಖಕರು :- ಶ್ರೀ ಸಿದ್ಧರಾಮ ಹೊನ್ಕಲ್ ಸಗರ
ಜಾಗೃತ ಪ್ರಕಾಶನ ಶಹಾಪೂರ ೫೮೫ ೨೨೩ (ಕಲಬುರ್ಗಿ)
ಪುಟ : ೫೦ ಬೆಲೆ : ೧೫-೦೦ (ಹದಿನೈದು ರೂಪಾಯಿ)
ಪ್ರಥಮ ಮುದ್ರಣ : ೧೯೯೧.

ಕಲಬುರ್ಗಿ ಜಿಲ್ಲೆಯಲ್ಲಿ ಬರಹಗಾರರಿಗೆ ಕೊರತೆಯಿಲ್ಲ. ಆದರೆ ಯಾಕೋ ಏನೋ ಎಂಬತ್ತರ ದಶಕದ ಕೊನೆಯವರೆಗೂ ಡಾ॥ ಚನ್ನಣ್ಣ ವಾಲೀಕಾರ ಶ್ರೀಮತಿ ಗೀತಾ ನಾಗಭೂಷಣ ಅವರಿಗೆ ಸರಿಗಟ್ಟುವಂತಹ ಸಮರ್ಥ ಕತೆಗಾರರು ಹುಟ್ಟಿಕೊಳ್ಳಲೇ ಇಲ್ಲ.

ಮೇಲಿನ ಮಾತಿಗೆ ಅಪವಾದವೆನ್ನುವಂತೆ ಶ್ರೀಮತಿ ಸವಿತಾ ಕುಸುಮಾಕರ ದೇಸಾಯಿ ಅವರ "ಕಾಶಿಯಲ್ಲಿ ಕಂಡದ್ದೇನು" ಕಥಾ ಸಂಕಲನ, ಹಾಗೂ ಇತರ ಕೆಲವರ ಸಂಪಾದಿತ ಕಥಾ ಸಂಕಲನಗಳನ್ನು ಹೆಸರಿಸಬಹುದಾದರೂ ನಿರಂತರವಾಗಿ ಕಥಾ ಸೃಷ್ಟಿ ಈ ಲೇಖಕರು ಕೈಗೊಳ್ಳಲಿಲ್ಲವೆಂದೇ ಹೇಳಬೇಕಾಗುತ್ತದೆ.

ಇತ್ತೀಚಿಗೆ ಆಕಾಶವಾಣಿಯವರು ಯುವ ಕತೆಗಾರರಿಗೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿರುವದರಿಂದ ಮತ್ತೆ, ಕತೆಗಾರರ ಸಂಖ್ಯೆ ಗಣನೀಯ ಅಲ್ಲದಿದ್ದರೂ, ಅಲ್ಲಲ್ಲಿ ಉತ್ತಮ ಕತೆಗಾರರು ಕಾಣಿಸಿಕೊಳ್ಳುತ್ತಿದ್ದಾರೆ. ಆದರೆ ಸತತ ಅಧ್ಯಯನ, ಹಿರಿಯರ ಮಾರ್ಗದರ್ಶನ ಸಿಗದೇ ಇರುವದರಿಂದಲೋ ಏನೋ ಗಮನಾರ್ಹ ಕತೆಗಳು ಕೊಡುವಲ್ಲಿ ಸೋಲುತ್ತಿದ್ದಾರೆ.

ಇಂಥಹ ಸಂದಿಗ್ಧ ಸ್ಥಿತಿಯಲ್ಲಿ ಶಹಾಪೂರಿನ ಶ್ರೀ ಸಿದ್ಧರಾಮ ಹೊನ್ಕಲ್ ಅವರು ಆರು ಕಥೆಗಳನ್ನೊಳಗೊಂಡ "ಕಥೆ ಕೇಳು ಗೆಳೆಯಾ...." ಕಥಾ ಸಂಕಲನ ಪ್ರಕಟಿಸಿದ್ದಾರೆ. ಈಗಾಗಲೇ ನಾಡಿನ ಹಲವಾರು ಪತ್ರಿಕೆಗಳಲ್ಲಿ ಕಥೆ, ಕಾವ್ಯ, ಹನಿಗವನಗಳ ಮೂಲಕ ತಮ್ಮನ್ನು ಗುರುತಿಸಿಕೊಂಡ ಹೊನ್ಕಲ್ ಅವರು ಉತ್ತಮ ಲಲಿತ ಪ್ರಬಂಧಗಳನ್ನೂ ಕೊಟ್ಟಿದ್ದಾರೆ.

೧೯೯೦ನೇ ಸಾಲಿನ ಸಂಕ್ರಮಣ ಸಾಹಿತ್ಯ ಸ್ಪರ್ಧೆಯಲ್ಲಿ ಲಲಿತ ಪ್ರಬಂಧ 'ಬಿಸಿಲು ಮದುವೆ ಆದದಕ್ಕೆ' ಬಹುಮಾನ ಪಡೆದದ್ದು ಇಲ್ಲಿ ನೆನಪಿಸಿಕೊಳ್ಳಬಹುದು.

ಈ ಮೊದಲು ಕಲಬುರ್ಗಿ ಜಿಲ್ಲೆಯ ಬರಹಗಾರರು ಕನ್ನಡ ಸಾಹಿತ್ಯದಲ್ಲಿ ಬಂದ ಹೋದ ನವೋದಯ, ಪ್ರಗತಿಶೀಲ, ನವ್ಯ ಪಂಥಗಳ ಜೊತೆಗೆ ತಮ್ಮನ್ನು ಸಮೀಕರಿಸಿಕೊಂಡಿದ್ದು ತೀರಾ ವಿರಳ, ಅಷ್ಟೇ ಅಲ್ಲ ಲಂಕೇಶ, ಅನಂತಮೂರ್ತಿ ತೇಜಸ್ವಿ ಚಿತ್ತಾಲರಂತಹ ಶ್ರೇಷ್ಠ ದರ್ಜೆಯ ಕತೆಗಾರರಿಂದ ಪ್ರಭಾವಿತರಾಗಿ ಬರೆದವರೂ ಕಡಿಮೆಯೇ ತಮ್ಮಷ್ಟಕ್ಕೆ ತಾವು ತಮಗೆ ತೋಚಿದನ್ನು ಬರೆದವರೇ ಜಾಸ್ತಿ. ಆದರೆ ಸಿದ್ಧರಾಮ ಹೊನ್ಕಲ್ ಅವರ "ಕಥೆ ಕೇಳು ಗೆಳೆಯಾ" ಕಥಾ ಸಂಕಲನ ಓದಿ ಮುಗಿಸಿದಾಗ ಎರಡು ಸಂಗತಿಗಳು ಸ್ಪಷ್ಟವಾಗಿ ಗಮನಕ್ಕೆ ಬರುತ್ತವೆ. ಒಂದು ಲೇಖಕರು ಬಂಡಾಯ ಸಾಹಿತ್ಯ ಚಳುವಳಿಯಿಂದ ಗಾಢವಾಗಿ ಪ್ರಭಾವಿತರಾದದ್ದು. ಎರಡು : ಬಂಡಾಯ ಸಾಹಿತ್ಯ ಚಳುವಳಿಯ ಪ್ರತಿಭಟನಾತ್ಮಕ ಧೋರಣೆಯ ಸಾಧ್ಯತೆಯನ್ನು ವಾಸ್ತವ ದಾರಿನಲ್ಲಿ ಒರೆಗಲ್ಲಿಗೆ ಹಚ್ಚಿ ನೋಡುತ್ತಿರುವದು.

ಸಂಕಲನದಲ್ಲಿಯ ಮೊದಲ ಕತೆ "ಕಾಯಿಸುವಳು ಶಕುಂತಲೆ ದುಷ್ಯಂತ ಬರುವನೆಂದು" ಉತ್ತಮ ಕತೆಗಳ ಸಾಲಿನಲ್ಲಿ ನಿಲ್ಲುವಂತಹದು. ಕತೆಯು ವಸ್ತು ವರದಕ್ಷಿಣೆಯ ಶಾಪದಿಂದ ಆಳದಲ್ಲಿ ನೋವನ್ನು ತುಂಬಿಕೊಂಡ ಇಬ್ಬರು ಗೆಳತಿಯರ ಗೋಳಿನ ಕತೆ. ರಾಧೆ ವಿದ್ಯಾವಂತೆ ಪಟ್ಟಣವೊಂದರ ಶಾಲೆಯಲ್ಲಿ ಶಿಕ್ಷಕಿ. ಮೂವತ್ತೈದು ವಸಂತಗಳನ್ನು ಕೃಷ್ಣ ಬರುವನೆಂದೂ, ತನ್ನ ಜವಾಬ್ದಾರಿ ಹೊತ್ತ ಅಣ್ಣ-ತಮ್ಮಂದಿರು ತಂದಾರು ಎಂದೂ, ಕನಸುಗಣ್ಣಿನಿಂದ ಕಾದವಳು. ಆದರೆ ಒಡ ಹುಟ್ಟಿದವರು ಎನಿಸಿಕೊಂಡವರು. ತಮ್ಮ ಹೆಂಡತಿಯ ಸೀರೆಯ ಚುಂಗು ಹಿಡಿದು ಓಡಾಡುವ ಷಂಡಂದಿರರಾದಾಗ ಕೃಷ್ಣ ಬರುತ್ತಾನೆ ಎನ್ನುವದು ಹುಸಿ ಭ್ರಮೆಯಾಗಿ ತೋರಿ ತಾನೇ ಹುಡುಕಿ ಹೋಗುತ್ತಾಳೆ. ಸಹನಾಮೂರ್ತಿ ಅಧ್ಯಾಪಕ ಗೋಪಾಲ ಮೇಷ್ಟ್ರು ವಿವಾಹಿತ ವಿಧುರ. ಅವನೊಡನೆ ಅಂತರಜಾತಿ ವಿವಾಹವಾಗುವ ಸಾಹಸ ಮಾಡುತ್ತಾಳೆ ಯಾವುದೇ ಆದರ್ಶದ ಬೆನ್ನು ಹತ್ತಿ ಹೋದಂತಹ ಸಾಹಸ ರಾಧೆಯದಲ್ಲ. ಆದರೆ ಆ ರಾಧೆ ಅನುಭವಿಸಿದ ನೋವು, ಹತಾಶೆ, ಸುಪ್ತ ಕಾಮನೆಗಳೇ ಆವಳ ನಿರ್ಧಾರಕ್ಕೆ ಪ್ರೇರಕ ಶಕ್ತಿಗಳಾಗುತ್ತವೆ.

ಆದರೆ ಇದಕ್ಕೆ ವ್ಯತಿರಿಕ್ತವಾಗಿ ರಾಧೆಯ ಗೆಳತಿ ಶಕುಂತಲೆ ಓದು ಬರಹ ಗೊತ್ತಿರದ ಅಮಾಯಕಿ. ಮೇಲಾಗಿ ಸಂಪ್ರದಾಯ. ಜಾತಿ, ಧರ್ಮವನ್ನು ಬಲವಾಗಿ ನಂಬಿದವಳು. ರಾಧೆಯ ಹಾಗೆಯೇ ಶಕುಂತಲೆಯ ಅಣ್ಣಂದಿರರೂ ಜವಾಬ್ದಾರಿಯಿಂದ ನುಣುಚಿಕೊಳ್ಳಲು ಪ್ರಯತ್ನಿಸುತ್ತಿರುವವರು. ರಾಧೆಯಂತೆಯೇ ಶಕುಂತಲೆಗೂ ನೋವು ಹತಾಶೆ, ಸುಪ್ತ ಕಾಮನೆಗಳಿದ್ದರೂ ದುಷ್ಯಂತನಿಗಾಗಿ ಹುಡುಕುವ ಸಾಹಸಿ ಅವಳಲ್ಲ.

ಶಕುಂತಲೆಗೆ ರಾಧೆ ಬರೆಯುವ ಪತ್ರದಲ್ಲಿ "ಸಂಪ್ರದಾಯ, ಜಾತಿ, ಧರ್ಮ, ದೇವರು ಎಂದುಕೊಂಡು ಕೊಳೆತು ನಾರುತ್ತಿರುವ ನಮ್ಮ ಜನರ ನಡುವಿನಿಂದ ವರದಕ್ಷಿಣೆ ವರೋಪಚಾರದಂತಹ ಸುಲಿಗೆಗಳಿಂದ ನಿನ್ನಣ್ಣಂದಿರರು ನಿನಗೊಬ್ಬ ದುಷ್ಯಂತನನ್ನು ತರುವರೆಂಬ ಹುಸಿ ಭ್ರಮೆಗಳಲ್ಲಿ ಮುಳುಗಿ ಹೋಗಿ ಜೀವನದ ಸಂಧ್ಯಾ ಕಾಲದಲ್ಲಿ ಬಿಕ್ಕಳಿಸಬೇಡ". ಎಂಬುದು ಕಥೆಯ ಆಶಯೂ ಆಗಿರುವಂತಿದೆ.

ಸಂಕಲನದಲ್ಲಿ ಗುರುತಿಸಲೇಬೇಕಾದ ಅತ್ಯುತ್ತಮ ರಚನೆಗಳೆಂದರೆ "ಕಥೆ ಕೇಳು ಗೆಳೆಯಾ" "ಕಾದಿರುವಳು ಶಕುಂತಲೆ" "ಸ್ಥಿತಿಗತಿ" ಕಥೆಗಳು.

'ಕಥೆ ಕೇಳು ಗೆಳೆಯಾ' ಕಥೆಯ ನಾಯಕ ಆನಂದ. ಗೌತಮ ಎಂಬ ಕ್ರಾಂತಿಕಾರಿ ಕಥೆಗಾರನ ಕಥೆಗಳಿಂದ ಪ್ರಭಾವಿತನಾದ ಬಿಸಿರಕ್ತದ ಯುವಕ. ಕಥೆಗಳಿಂದ ಪ್ರೇರಿತನಾಗಿ ತಾನು ದುಡಿಯುತ್ತಿರುವ ವಿದ್ಯಾ ಸಂಸ್ಥೆಯಲ್ಲಿ ತನಗಾಗುತ್ತಿರುವ ಅನ್ಯಾಯವನ್ನು ಉಗ್ರವಾಗಿ ಪ್ರತಿಭಟಿಸಲು ಹೋಗಿ ತೊಂದರೆಗೆ ಸಿಕ್ಕಿಕೊಂಡವ.

ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಮಲ್ಲನಗೌಡರ ಕಪಿ ಮುಷ್ಟಿಯಲ್ಲಿ ಸಿಕ್ಕು ಗೌಡರ ತಂದೆಯ ಉಪಪತ್ನಿಯ ಮಗಳನ್ನು ಮದುವೆಯಾಗಿ, ಕೊನೆಗೆ ಮಲ್ಲನ ಗೌಡರು ತನ್ನನ್ನು ಆಸ್ತಿ ಲಪಟಾಯಿಸಲು ಸಾಧನವಾಗಿ ಬಳಸಿಕೊಂಡಿದ್ದು ತಿಳಿದು ಪ್ರತಿಭಟಿಸುತ್ತಾನೆ. ಕ್ರೂರ ವ್ಯವಸ್ಥೆಯಲ್ಲಿ ಆನಂದನೇ ತಪ್ಪಿತಸ್ಥನಾಗುತ್ತಾನೆ. ಕೊನೆಗೆ ಗೌಡನನ್ನು ಕೊಲೆಮಾಡುವ ಮೂಲಕ ಕ್ರೌರ್ಯವನ್ನು ಮೆಟ್ಟಿ ನಿಲ್ಲುತ್ತಾನೆ. ಇವಿಷ್ಟು ಕಥಾವಸ್ತು. ಈ ಕಥೆಯಲ್ಲಿ ಲೇಖಕರು ಕ್ರೂರ ವಾಸ್ತವದಲ್ಲಿ ಪ್ರತಿಭಟನೆಯ ವೈಚಿತ್ರ್ಯವನ್ನು ಚರ್ಚೆಗೆ ಒಳಪಡಿಸಿದ್ದಾರೆ. ಸಂಕೀರ್ಣ ಬದುಕಿನ ಸಂದರ್ಭದಲ್ಲಿ ಪ್ರತಿಭಟನೆಗೆ ಸಂಬಂಧಪಟ್ಟಂತೆ ಹಲವಾರು ಪ್ರಶ್ನೆಗಳು ಲೇಖಕರನ್ನು ಕಾಡಿದಂತಿವೆ.

ಕ್ರಾಂತಿಕಾರಿ ಸಾಹಿತ್ಯ ಓದಿದ ಯುವಕ ನಿಜಜೀವನದಲ್ಲೂ ಪ್ರತಿಭಟಿಸಲು ಹೋದ ಪರಿಣಾಮ "ಕಥೆ ಕೇಳು ಗೆಳೆಯಾ" ಚಿತ್ರಿಸುತ್ತದೆ.

"ಸ್ಥಿತಿಗತಿ" ನಿರುದ್ಯೋಗಿ ಯುವಕನೊಬ್ಬ ಹೊರನಾಡಿನಲ್ಲಿ ಉದ್ಯೋಗ ಅರಸಲೂ ಹೋದಾಗ, ಕನ್ನಡದವನು ಎಂಬ ಒಂದೇ ಕಾರಣಕ್ಕೆ ಅರ್ಹತೆಯಿದ್ದರೂ ಉದ್ಯೋಗ ಸಿಗದೇ ಆತ್ಮಹತ್ಯೆ ಮಾಡಿಕೊಂಡ ದುರಂತದ ಕಥೆ ಓದುಗರಿಗೆ ವಿಷಾದ ಕಟ್ಟಿಕೊಡುವಲ್ಲಿ ಲೇಖಕರ ನಿರೂಪಣಾ ವಿಧಾನ ಪರಿಣಾಮಕಾರಿ

ಎನಿಸುತ್ತದೆ. ಸಂಕಲನದಲ್ಲಿಯ ಇನ್ನೆರಡು ಕತೆಗಳಾದ 'ಹೀಗೊಂದು ಪ್ರೇಮ ಪ್ರಕರಣ ಮತ್ತು 'ದುರಂತದ ಬೆನ್ನು ಹತ್ತಿ' ಕತೆಗಳು ನಿರುಪಣೆ, ಶೈಲಿ, ತಂತ್ರ ಭಾಷಾ ಬಳಕೆಯ ದೃಷ್ಟಿಯಿಂದ ಉತ್ತಮವೆನಿಸಿದರೂ ನಿರೀಕ್ಷಿತ ತಿರುವು ಮತ್ತು ಮಾಮೂಲಿ ಪ್ರೇಮ ಕತೆಗಳ ಸಾಮಾಗ್ರಿ ತುಂಬಿ ಕೊಂಡಿರುವದರಿಂದ ಗಮನಾರ್ಹವೆನಿಸುವದಿಲ್ಲ.

ಒಟ್ಟು ಹೇಳಬೇಕೆಂದರೆ ಶ್ರೀ ಸಿದ್ಧರಾಮ ಹೊಸ್ಮನಿಯವರು ಉತ್ಸಾಹದಿಂದ ಜನಪ್ರಿಯ ಧಾಟಿಯಲ್ಲಿಯೇ ಕತೆ ಹೇಳುತ್ತಾರೆ. ಉದಾಹರಣೆಯಾಗಿ; "ಅವಳು ಶಾಪಗ್ರಸ್ತ ಶಿಲೆಯಾಗಬಾರದೆಂದು" ನಿಮಗನಿಸಿದರೆ ಒಂದು ದಾರಿ ತೋರಿಸುವಿರಾ? ಕಣ್ಣಿದ್ದು ಕುರುಡನಾ ಹತ್ತರಲ್ಲಿ ಹನ್ನೊಂದನೆಯವನಾಗಿ ಬಾಳಬೇಕೆ ? ಮೋಸಗಳೇ ಮೌಲ್ಯವಾಗಿರುವ ಪ್ರಪಂಚದಲ್ಲಿ ಅವನೀಗ ಇಲ್ಲಾ ಎಂದು ತಿಳಿಸುವಿರಾ ? ಎಂಬಂತಹ ಪ್ರಶ್ನೆಗಳನ್ನು ಗಮನಿಸಬಹುದು.

ಮನೋಧರ್ಮ ಬಂಡಾಯದಾಗಿದ್ದರೂ ಬದುಕಿನ ಸಮಗ್ರ ಅನುಭವಗಳನ್ನು ನಿರಾಕರಿಸುವದಿಲ್ಲಾ. ಬದುಕಿನ ಬಗ್ಗೆ ಆರೋಗ್ಯಕರ ನಿಲುವು ತಾಳುತ್ತಾರೆ. ಕ್ರಾಂತಿ, ಹೋರಾಟ, ಆದರ್ಶಗಳಿಗಿರುವ ಹಲವು ಸಾಧ್ಯತೆಗಳನ್ನು ಗೌಣಗೊಳಿಸುವದಿಲ್ಲ, ಲೇಖಕರು ಬಳಸುವ ಭಾಷೆ, ಶೈಲಿ, ತಂತ್ರದಿಂದಾಗಿ ಕತೆಗಳು ಓದಿಸಿಕೊಂಡು ಹೋಗುತ್ತವೆ. ಓದುಗನ ಮೇಲೆ ಆ ಕ್ಷಣಕ್ಕೆ ಪರಿಣಾಮ ಉಂಟು ಮಾಡುತ್ತವೆ. ಕತೆ ಹೇಳುತ್ತಾ ಕತೆಗೆ ಒಂದು ಆವರಣ ಕಲ್ಪಿಸುವಲ್ಲಿ, ಬದುಕನ್ನು ಸೂಕ್ಷ್ಮವಾಗಿ ನಿರೀಕ್ಷಿಸುವಲ್ಲಿ, ಕತೆಗಳನ್ನು ಕಲಾತ್ಮಕವಾಗಿ ಕಟ್ಟಿಕೊಡುವಲ್ಲಿ ಸೋಲುವವಿಲ್ಲ, ಆದರೆ ಕತೆ ಹೇಳುವ ಉತ್ಸಾಹದಲ್ಲಿ ಮಾತುಗಳು ಜಾಸ್ತಿಯಾಗಿ ಕ್ರಿಯೆ ಕುಂಠಿತಗೊಳ್ಳುತ್ತದೆ. ಮೇಲೆ ಗುರುತಿಸಿದ ಒಂದೆರಡು ಮಿತಿಗಳನ್ನು ಮೀರಿ ಬೆಳೆಯುವ ಪ್ರಯತ್ನ ಮಾಡಿದರೆ ಶ್ರೀ ಸಿದ್ಧರಾಮ ಹೊಸ್ಮನಿಯವರು ನಿಜಕ್ಕೂ ನಮ್ಮ ಭಾಗದ ಒಬ್ಬ ಮಹತ್ವದ ಕಥೆಗಾರರಾಗಬಲ್ಲರು.

ಕೆಲವೊಂದು ಮಿತಿಗಳಲ್ಲೂ " ಕತೆ ಕೇಳು ಗೆಳೆಯಾ " ಕಥಾ ಸಂಕಲನ ಒಂದು ಅರ್ಥಪೂರ್ಣ ಪ್ರಯತ್ನ. ಓದಲೇಬೇಕಾದ ಕೃತಿ.

ಕೃಪೆ :– ಆಕಾಶವಾಣಿ ಗುಲಬರ್ಗಾ (೧೯೯೨)

# ಪ್ರತಿರೂಪಿ (ಕಥೆ)

● ಗೌರೀಸುತ ಗಣೇಶ

ಶ್ರಾವಣದ ಮಾಗುತಿರುವ ಬೆಳಗು. ಕಿಟಕಿಯಾಚೆ ದೃಷ್ಟಿ ನೆಟ್ಟ. ರಾತ್ರಿ ಬಿದ್ದು ಸಾಲದೆಂದು ಮೋಡಗಳು ದಟ್ಟೈಸಿದ್ದರಿಂದ ಮಬ್ಬು ಕವಿದಿದೆ. ಹದ್ದು ರೆಕ್ಕೆ ಬಿಚ್ಚಿ ಹಾರುವದ ಕಂಡು ಹಕ್ಕಿಯಾಗಿ ಹಾರಬೇಕು, ನವಿಲಾಗಿ ಕುಣಿಬೇಕು, ಮೀನಾಗಿ ಈಜಬೇಕೆಂದೆಲ್ಲ ಕನಸಿಸಿದ್ದ. ಆದರೀಗ ನಾಲ್ಕು ಗೋಡೆಗಳ ಮಧ್ಯ ಬಂಧಿಯಂತೆ ಬದುಕುತ್ತಿರುವ ಪರಿಗೆ ಬೇಸತ್ತ. ಊರಿನಿಂದ ಯಾಕಾದರೂ ಬಂದೇನೆಂಬ ಕೊರಗು ಕಾಡಿ ಮನದ ತುಂಬ ವಿಚಿತ್ರ ದುಗುಡ ತುಂಬಿದೆ. ಎಲ್ಲಿತ್ತೋ ಮತ್ತೊಂದು ಹದ್ದು ಮೊದಲ್ಲಿದ್ದ ಹದ್ದಿನೊಂದಿಗೆ ಜೊತೆಯಾಗಿ ಹಾರುವಾಗ ನೆನಪಾತು, ರಸ್ತೆಯಂಚಿನಲ್ಲಿ ಸತ್ತ ಬಿಕ್ಷುಕನ ಹೆಣಕ್ಕಾಗಿ ಬಂದಿರಬೇಕು.

ದರಿದ್ರ ಮುನಿಸಿಪಾಲಿಟಿ, ಇನ್ನೂ ಹೆಣ ಒಯ್ದಿಲ್ಲ. ಯಾರಾದರೂ ತಿಳಿಸಿದ್ದಾರೊ ಇಲ್ಲವೊ, ಯಾರು ತಿಳಿಸಬೇಕು? ಯಾರಿಗೆ ಯಾರು. ನೆರೆಮನೆಯಲ್ಲಿ ಸತ್ತರೆ ಸಾಂತ್ವನ ಹೇಳುವವರಿಲ್ಲ ಈ ಕಾಲದಲ್ಲಿ ! ಸತ್ತ ಭಿಕ್ಷುಕನಿಗಾಗಿ ಅಳುವವರಾರು. ಬೇಡ, ಮಣ್ಣುಗಾಣಿಸಲು ವ್ಯವಸ್ಥೆ ಮಾಡಿದರೆ ಸಾಕು. ವ್ಯವಸ್ಥೆ ಎಂದರೆ ಹಣದ ಚಂದಾ ಎತ್ತಿ ಮೆರವಣಿಗೆ ಮಾಡಿ ಮಣ್ಣು ಮಾಡುವದಲ್ಲ, ಮುನಿಸಿಪಾಲಿಟಿಗೆ ಫೋನಿಸಿದರೆ ಸಾಕು. ಯಾರಿಗೆ ಬಿಡುವಿದೆ ? ನೋಡುವದು. ತುಟಿ ಸಹಾನುಭೂತಿ ಹೇಳುತ್ತಾ ಮುಂದೆ ಹೋಗುವವರೆ ಎಲ್ಲ. ಎದುರು ಮನೆಯಲ್ಲಿ ಫೋನಿದೆ. ಫೋನಿಸೆಂದು. ಯಜಮಾನನಿಗೆ ಹೇಳಿದರೆ "ಯಜಮಾನ್ರು ಬೇಗ ಜಡಿದಿದ್ದಾರೆಂದು" ಅವನ ಬಾಯಿ ಬಿಗಿದಳು. ತಾನೇ ಹೋಗಿ ಹೇಳಿ ಬರಬೇಕೆಂದರೆ ಎಲ್ಲೂ ಹೋಗುವಂತಿಲ್ಲ.

ಹೊರಗೆ ಕಾಲಿಡಲೂ ಭಯ ! ಕೋಣೆಯಲ್ಲಿ ಕೂತು ಕೂತು ಸಾಕಾಗಿದೆ. ಈ ಸತೀಶನಾದರೂ ಬರಬಾರದೆ, ನಾಟಕದ ರಿಹರ್ಸಲ್‌ನಲ್ಲಿರಬೇಕು. ಬೇಜಾರಾದಾಗ ಎನ್ನುವದಕ್ಕಿಂತ ಎದುರು ಮನೆಯ ರಶ್ಮಿ ಕಾಣಲು ಬರುತ್ತಾನೆ. ಹೊಟ್ಟೆ ಚುರುಗುಡುತ್ತದೆ. ಬೆಳಗಿನಿಂದ ಏನೂ ತಿಂದಿಲ್ಲ. ಜುಬ್ಬ, ಪೈಜಾಮ ತೊಟ್ಟು

ಬೀದಿಗಿಳಿವಂತಿಲ್ಲ. ಊರಿನಲ್ಲಿ ಹಾಯಾಗಿದ್ದ. ಆದರೆ ಜಡವಾಗುತ್ತಿರುವ ಊರಿನಲ್ಲಿ ಕ್ರಿಯೇಟಿವ್ ಸತ್ತಿದೆಯೆನಿಸಿದಾಗ, ಪುಸ್ತಕಗಳ ತಿರುವಿದ್ದು ಸಾಕಾದಾಗ ಸತೀಶನ ಪತ್ರ ಬಂತು, "ಕಾಲಿಗುಲ" ನಾಟಕ ಮಾಡಿಸುತ್ತಿರುವೆ. ನೋಡಲು ಬಾಯೆಂದು ಬರೆದಿದ್ದ. ನಾಟಕದ ದಿನವೇ ಬಂದರೂ ಆಗುತಿತ್ತು. ಊರಲ್ಲಿ ಮಾಡುವುದೇನೆಂದು ಹೊರಟು ಬಂದರೆ ಇಲ್ಲಿ ವಿಚಿತ್ರ ಗೊಂದಲದಲ್ಲಿ ಸಿಕ್ಕು ಬಿದ್ದ.

ಮಲಗಿದ

ಕಣ್ಣು ಮುಚ್ಚಿ ಮಲಗಲಂತೂ ಅಸಾಧ್ಯ. ಪಿಳಿ ಪಿಳಿ ಕಣ್ಬಿಟ್ಟು ಮೇಲೆ ನೋಡಿದರೆ ರಿಪೇರಿಗೆ ಬಂದಿರುವ ಜಂತಿ. ಬಿರುಕು ಬಿಟ್ಟಿರುವ ಗೋಡೆ. ಮಗ್ಗುಲು ಹೊರಳಿ ಪುಸ್ತಕದ ಸಾಲಿಗೆ ಕೈಯಿಟ್ಟರೆ ಯಾಕೋ ಬೇಡವೆನಿಸಿ ಈ ಕೋಣೆ, ಈ ಪರಿಸರ, ಈ ಜಗತ್ತು ಯಾವುದೂ ಬೇಡ. ಸ್ವಚ್ಛಂದ ಹಕ್ಕಿಯಾಗಿ ಹಾರಬೇಕೆಂದರೆ ಕಾಲು ಕಟ್ಟಿ ಹಾಕಿದಂತೆ. ಉಸಿರುಗಟ್ಟಿಸುವ ಈ ಕೋಣೆಯಲ್ಲಿ ಕೊಳೆಯುವಾಗ ಆಜೀವ ಕಾರಾಗ್ರಹದ ಖೈದಿಯೆಂತೆಣಿಸಿ ಬದುಕೇ ಬೇಜಾರಾಗಿ ವಿಸ್ಮೃತಿ ಸುತ್ತುಗಟ್ಟಿದೆ. ಜಡತೆ ಕಡಿಮೆಯಾಗಿ ನಿರಂಬಳವಾಗಲೆಂದು ಕೈಕಾಲೆಲ್ಲ ಚೆಲ್ಲಿ ಶವಾಸನದಲ್ಲಿ ಮಲಗಿದ. ಹಾಯೆನಿಸಿತು, ಹಾಗೆ ಜೊಂಪು ನಿದ್ದೆ.

ಬಾಗಿಲು ಬಡಿದ ಸದ್ದು.

ತಟ್ಟನೆ ಎಚ್ಚರಾಗಿ ಯಾರೆಂದ ಉತ್ತರವಿಲ್ಲ. ಜೋರಾಗಿ ಬಾಗಿಲು ಬಡಿಯುತ್ತಿದ್ದಾರೆ. ಯಾಕೋ ಸಂಶಯ ಬಂತು. ಮತ್ತೊಮ್ಮೆ ಕೇಳಬೇಕೆಂದಾಗ ನಡುಗುವ ಸ್ವರದಲ್ಲಿ ಧ್ವನಿ ಅಡಗಿತು. ಇದ್ದ ಧೈರ್ಯ ಒಟ್ಟುಗೂಡಿಸಿ ಕೇಳಬೇಕೆಂದ. ಗಂಟಲು ಒಣಗಿತು. ಬಾಗಿಲನ್ನು ಮುರಿಯುತ್ತಾರೆನೋ ಎನ್ನುವಷ್ಟು ಜೋರಾಗಿ ಬಡಿದ ಸದ್ದಿಗೆ ಸಾವಕಾಶವಾಗಿ ಎದ್ದು ಬಾಗಿಲೂ ತೆರೆದ; ಬಾಯಿಯೇ ಬಾರದು. ಪೋಲಿಸರು ನಿಂತಿದ್ದಾರೆ. ಪೋಲಿಸರಲ್ಲ. ಯಮನ ಕಿಂಕರರು! ಬೇಡಿ ತೋರಿಸುತ್ತಿದ್ದಾರೆ. ಒಳಗೆ ಕಾಲಿಟ್ಟಾಗ "ನಾನಲ್ಲ". ನನಗೇನೂ ಗೊತ್ತಿಲ್ಲ ಬಿಟ್ಟುಬಿಡಿ ಚೀರಿದ ಕೆನ್ನೆಗೆ ಏಟು ಬಿತ್ತು. ಕಣ್ಣಿಗೆ ಕತ್ತಲಿಟ್ಟು ಜಗತ್ತು ಗರ ಗರ ತಿರುಗಿದಂತಾಗಿ ಕೆಳಬಿದ್ದ. ನೀರು ತಟ್ಟಿ ಎಚ್ಚರಿಸಿ ಬೇಡಿ ತೊಡಿಸಿದರು. ಈಗ ಪ್ರತಿಭಟಿಸಲು ಅವನಿಂದಾಗುತ್ತಿಲ್ಲ. ಅಸಹಾಯಕನಾಗಿ ಪಿಷ್ಟಿಸಂಗೆ ಬಳಗಾದವನಂತೆ ಸುಮ್ಮನೆ ಹೊರಟ. ಹೊರಗೆಲ್ಲ ಜನರು ಮೂಕವಾಗಿ ನಿಂತು ನೋಡುತ್ತಿದ್ದಾರೆ. ತಲೆತಗ್ಗಿಸಿದ. ಇಂಥದನ್ನು ಎಂದೂ ಕಂಡಿರಲಿಲ್ಲ. ಎಷ್ಟೋ ಸಮಾರಂಭದಲ್ಲಿ ಪಕ್ಕದಲ್ಲಿರುವ ಎಸ್. ಪಿ. ಕೈಗಳಿಂದಲೇ ಮಾಲೆ ಹಾಕಿಸಿಕೊಂಡನೀಗ ಅವರ ಕೈಗಳಿಂದಲೇ ತನಗೆ

ಮುಗಿಳ್ಳಕ್ಕ ಮೋಡಗಳಿಂದ ಹನಿಯುದರಲಾರಂಭಿಸಿತು. ಈ ಶ್ರಾವಣದ ಮಳೆಯೇ ಹೀಗೆ ಬಯಸಿದಾಗ ಬರದೆ ದೌಡಾಯಿಸಿ ದಾಂಧಲೆಯಿಡುವದು. ಕಿಟಕಿಯಲ್ಲಿ ಮುಖವಿಟ್ಟ ಎದುರು ಮನೆ ಹುಡುಗ ಮಳೆಯಲ್ಲಿ ನೆನೆಯುತ್ತ ಕೇಕೆ ಹಾಕುವುದು ಕಂಡು ಬಾಲ್ಯವೇ ಚೆನ್ನ. ಹುಡುಗನಾಗಿದ್ದಾಗ ಮಳೆಯಲ್ಲಿ ನೆನೆದು; ಹಾಳೆಯ ಹಡಗ ಮಾಡಿ ನೀರಲ್ಲಿ ಬಿಡುವಾಗ ಅಪ್ಪ ಬೆತ್ತದಿಂದ ಹೊಡೆದಿದ್ದ. ಇನ್ನೆಂದೂ ಹುಡುಗರೊಡನೆ ಬೆರತು ಆಡದಂತೆ ಕಟ್ಟಾಜ್ಞೆ ಮಾಡಿದಾಗ ಕಂಬದ ಮರೆಯಲ್ಲಿ ಅತ್ತಿದ್ದ ಶಬ್ದವಾಗದಂತೆ.

ತನ್ನ ಅಪ್ಪನ ಸ್ವಭಾವವೇ ವಿಚಿತ್ರ ಎಲ್ಲ ತಾನು ರೂಪಿಸಿದ ಚೌಕಟ್ಟಿನೊಳಗೆ ನಡೆಯಬೇಕು. ತನ್ನ ಹಾಗೆ ಮಗನೂ ವ್ಯಾಪಾರ ಮಾಡಬೇಕು. ಗೋಧಿ ಚೀಲ ಎಷ್ಟು ಬಂತು, ಸಕ್ಕರೆ ಎಷ್ಟು ಕೊಡಬೇಕು....ಲೆಕ್ಕದೊಡನೆ ಎಲೆಯಡಿಕೆ ತಿಂದು ಮಾತಿಗೊಮ್ಮೆ ಪಿಚಕ್ಕೆಂದು ಉಗುಳುತ್ತ ಆಳುಗಳಿಗೆ ಬೈಯುತ್ತ ಸಂಜೆ ಕಂತೆ ಕಂತೆ ದುಡ್ಡೆಣಿಸುವಂತೆ ತನ್ನ ಮಗನಾಗಬೇಕೆಂಬ ಬಯಕೆಗೆ ಈತ ಹಗಲು ಗುಡ್ಡ ಬೆಟ್ಟ ಸುತ್ತಿದರೆ, ರಾತ್ರಿ ಚಂದ್ರನ ಮೇಲೆ ಕವಿತೆ ಬರೆವ ಹುಚ್ಚು. ಅಪ್ಪನ ಎರಡನೇ ಹೆಂಡತಿಯಾಗಿ ಬಂದವಳು ಕೇರು ಮಾಡದಾಗ, ಮನೆಯ ಶೀತಲ ವಾತಾವರಣದಲ್ಲಿ ಡಿಗ್ರಿ ಮುಗಿಸಿ ಅಪ್ಪನೊಂದಿಗೆ ಜಗಳಾಡಿ ಎಂ. ಎ. ಓದಲು ಧಾರವಾಡಕ್ಕೆ ಕಾಲಿಟ್ಟ. ಈಗಲೂ ಗಟ್ಟಿಯಾಗಿ ಮಾತಾಡದವನು. ಮಾತಿಗಿಂತ ಮೌನಿಯಾದುದ ಹೆಚ್ಚು. ಜಗತ್ತಿನಲ್ಲಿ ತನ್ನಷ್ಟು ನೋವನ್ನನುಭವಿಸುವವರು ಬೇರಾರಿಲ್ಲವೆಂಬಂತೆ ಒಂಟಿಯಾಗಿ ಸದಾ ಖಿನ್ನನಾಗಿದ್ದವನು ಗೆಳೆಯರು ಛೇಡಿಸಿದಾಗಲೂ ಸುಮ್ಮನಿರುವನು.

"ನೀವು ಯಾಕ ಮಾತಾಡೋದಿಲ್ಲ? ಎಲ್ರೂ ಜೊತೆ ಬೆರೀಬೇಕು" ಲಲಿತಾ ಹೇಳಿದಾಗ ಏನೆಂದು ಹೇಳಬೇಕೆಂದು ಗೊತ್ತಾಗದೆ ಸುಮ್ಮನೆ ನಿಂತಾಗ ಮಾತು ಬರಲ್ಲವಾ? ಮೂಕರಾ....ಸಕ್ಕು ಕೇಳಿದಾಗ ತಲೆ ಅಲ್ಲಾಡಿಸಿ "ಏನು ಮಾತಾಡ್ಲಿ?" ಕೇಳಿದವನು. ಆಕೆ ಸಮುದ್ರ ಈತ ಬಂಡೆ ಎಲ್ಲರೂ ಛೇಡಿಸುವಾಗ ಈಕೆ ತಡೆದಿದ್ದಾಳೆ ಎದೆ ಕಣಿವೆಯಲ್ಲಿ ಬಂದು ಮಿಂಚು ಹುಳುವಾಗಿ ಹೊಳೆವ ನೀಲಿಗಣ್ಣಿನ ಹುಡುಗಿಯನ್ನು ರೆಪ್ಪೆಯಲುಗಿಸದೆ ನೋಡುತ್ತಾ ಕೂತಿದ್ದಾನೆ ಎಷ್ಟೋ ಸಲ ಆ ದಿನ ಲೈಬ್ರರಿಯಲ್ಲಿ ಓದುವಾಗ ತಟ್ಟನೆ ಕರೆಂಟು ಹೋದಾಗ ಲಲಿತ ತುಟಿಗೆ ತುಟಿಯೊತ್ತಿದಾಗ ಇವನ ದೇಹದಲ್ಲಿ ಕರೆಂಟು ಹರಿದಂತಾಗಿ ಮೈಮೇಲಿನ ರೋಮಗಳೆಲ್ಲ ಬೆರಗಾಗಿ ಎದ್ದು ನಿಂತವು.

ನಿನ್ನೆ ಲಲಿತಾ ಕಂಡಾಗ "ಶ್ರೀಪೆರಂಬೂದೂರಿನಿಂದ ತಪ್ಪಿಸಿಕೊಂಡು ಬಂದೆಯಾ?" ಕೇಳಿದಾಗ ಯಾಕೆಂದ. "ರಾಜೀವಗಾಂಧಿ ಹಂತಕರ ಪೈಕಿ ಒಕ್ಕಣ್ಣ

ನಿಂತಿದ್ದಿ. ಜುಬ್ಬ ಬೇರೆ ಹಾಕಿರುವೆ, ಪೋಲೀಸರಿಗೆ ಕಂಡೆಯಾ? ಕೇಳಿದಾಗ ಗಾಬರಿಯಾದ ಗೆಳೆಯರೆಲ್ಲ ಬಿಡಲಿಲ್ಲ. ಹಿಡಿದು ಕೊಟ್ಟವರಿಗೆ ಹತ್ತು ಲಕ್ಷ ರೂ. ಸಿಗುತ್ತೆ. ಇವನನ್ನು ಸ್ಟೇಷನ್ನಿಗೆ ಕರೆದೊಯ್ಯೋಣ" ಎಂದ ಕೇಶವ ಈತ ಬೆಚ್ಚಿ ಬಿದ್ದು ನಾಳೆ ಸಿಗ್ತಿನೆಂದು ಹೊರಟು ಬಂದ ರಸ್ತೆ ದಾಟುವಾಗ ಪೋಲಿಸು ದಿಟ್ಟಿಸುವುದ ಕಂಡು ಇವನೆದೆ ಹಲಗೆಯಾಗಿ ಬೇಗ ಬೇಗ ಹೆಜ್ಜೆಯಿರಿಸಿ ಕೋಣೆ ಸೇರಿಕೊಂಡ.

ಗೆಳೆಯರ ಮಾತಿಗೆ ಕಳವಳಗೊಂಡು ಬಂದರೆ ರಶ್ಮಿ ಬಿಡದೆ ಪತ್ರಿಕೆಯಲ್ಲಿ ಬಂದಿರುವ ಶಿವರಾಸನ್ ಫೋಟೋ ನಿಮ್ಮದೆ. ಗುಂಗುರು ಕೂದಲು, ಕನ್ನಡಕ, ಜುಬ್ಬ ಎಲ್ಲ ಹಾಗೆ, ಪೋಲೀಸರಿಗೆ ಫೋನಿಸಲಾ? ಪ್ರಶ್ನಿಸಿದಾಗ ತೊದಲಿದ ನಿಜ ಇವರೆಲ್ಲರ ಮಾತಿನಂತೆ 'ಅವನ' ಹೋಲಿಕೆಗಳು ತನಗಿದೆ. ತನಗೂ ಹಾಗನಿಸಿದೆ. ಧಾರವಾಡದ ಮರದ ನೆರಳಲ್ಲಿ ಬಿಸಿಲು ತಾಗದೆ ಊರಿನಲ್ಲಿ ರಾಚುವ ಬಿಸಿಲಿಗೆ ಕಪ್ಪಾಗಿ ಹಂತಕ ತಾನೆಂದು ನೋಡುತ್ತಿದ್ದಾರೆ ಎಲ್ಲ.

ಹುಲಿಯ ವೇಷದ, ಪಟ್ಟೆಯಾಕಾರದ ಡ್ರೆಸ್ ತೊಟ್ಟು ಅಪ್ಪನ ಎದುರಿಗೆ ಗನ್ ಹಿಡಿದು ತಾನು ಹೇಳಿದಂತೆ ಕೇಳಬೇಕೆಂದು ಗುಡಗಬೇಕು. ಅವ್ವಳನ್ನು ಗಡಗಡ ನಡುಗಿಸಬೇಕು. ಗೆಳೆಯರು ಕಾಡಿಸದಂತೆ ಕೋಪಿಯಿಂದ ತಿವಿದು ಎಚ್ಚರಿಸಬೇಕು ನಂತರ ಸಮಾಜದ ದ್ರೋಹಿಗಳನ್ನು ಕೊಲ್ಲಬೇಕೆಂದು ನಕ್ಸಲೈಟರೊ, ಎಲ್‌ಟಿಟಿಇ. ಸದಸ್ಯನಾಗಬೇಕೆಂದು ಮನಸಿನಲ್ಲಿ ಮಂಡಿಗೆ ತಿಂದವನು. ಆದರೀಗ ಏನೂ ಇಲ್ಲದೆ ಹೀಗೆ ಒಮ್ಮೆಲೆ ಹಂತಕನ ಪಟ್ಟಕ್ಕೇರಿಸಿದರಲ್ಲ.... ಕಳವಳಗೊಂಡ. ನಾಳೆ ನಾಟಕ ನೋಡುವುದೂ ಬೇಡ, ಯಾವುದೂ ಬೇಡ. ಈ ದಿನ ರಾತ್ರಿ ಊರಿಗೆ ಹೊರಡಬೇಕು ಗೆಳೆಯರ ಮಾತೇ ನಿಜವಾಗಿ ಪೋಲೀಸರ ಕೆಂಗಣ್ಣಿಗೆ ಬಿದ್ದು ವಿನಾಕಾರಣ ತನಿಖೆಗೊಳಗಾಗುವದಕ್ಕಿಂತ ಇಲ್ಲಿಂದ ಹೊರಡಬೇಕು. ಅಪ್ಪನ ಬೈಗುಳ, ಅವ್ವಳ ಕ್ರೂರ ನೋಟದ ತಡೆಗೆ ಬೇಗ ಊರು ಕಾಣಬೇಕೆಂದುಕೊಂಡ.

ಆದರೆ, ಊರಲ್ಲಿ ಏನಿದೆ? ಗೆಳೆಯರಿಗೂ ತನಗೂ ನಡುವೆ ದೊಡ್ಡ ಕಂದರ ದುಶ್ಚಟಗಳಿಗೆ ಬಲಿಯಾಗಿ ಪೋಲಿ ಮಾತುಗಳಾಡುತ್ತ ಕಾಲ ವ್ಯಯಿಸುವ ಗೆಳೆಯರ ಕಂಡು ಮನೆಯಲ್ಲಿದ್ದರೆ ಅವ್ವಳ ಕಣ್ಣುಗಳು ಇರಿಯುತ್ತವೆ. ಕಾಡುವ ಅಪ್ಪ.... ಎದ್ದು ಕನ್ನಡಿಯೆದುರು ನಿಂತ 'ಟಿವಿಯಲ್ಲಿ ಬರುವ ಒಕ್ಕಣ್ಣನಂತೆ ಪಾಸ್‌ಪೋರ್ಟ ಸೈಜಿನ ಫೋಟೋ ಬಿಟ್ಟರೆ, ಕೈಲಿ ಪೇಪರ್' ಹಿಡಿದು, ಜುಬ್ಬ ಹಾಕಿರುವ ಒಕ್ಕಣ್ಣನಂತೆಯೇ ತಾನಿರುವೆ ಬೆರಗಾದ. ಮತ್ತೆ ಕನ್ನಡಿಯಲ್ಲಿ ಮುಖವಿಟ್ಟ. ತನಗೆರಡೂ ಕಣ್ಣಿವೆ. ಆದರೆ ಶಿವರಾಸನ್ ಒಕ್ಕಣ್ಣ. ಗೆಳೆಯ ರವಿಯ ಮಾತು ನೆನಪಾಯ್ತು. ನಿನ್ನದೊಂದು ಕಣ್ಣು ಕಿತ್ತೋಣ. ಒಕ್ಕಣ್ಣನಾಗಲು ಇದೊಂದು ಬಾಕಿ, ಹತ್ತು ಲಕ್ಷ

ಸಿಗುತ್ತೆ. ಎಂ.ಎ. ಮುಗಿದು ಏಳೆಂಟು ವರ್ಷಾತ್ತು, ನಿರುದ್ಯೋಗ ನೀಗುತ್ತೆ" ಗಂಭೀರ ಹುಡುಗ ಬೆಚ್ಚಿ ನೋಡಿದರೆ ರವಿಯ ಕಣ್ಣಲ್ಲಿ ಕ್ರೌರ್ಯ ಕಂಡ. ಏನೋ ಸದ್ದಿಗೆ ಬೆಚ್ಚಿ ನೋಡಿದ. ಇಲ್ಲಿ ಹಿಡಿಯಲು ಓಡಾಡುತ್ತಿದೆ ಬೆಕ್ಕು ತನ್ನ ಸ್ಥಿತಿಯೂ ಇಲಿಯಂತಿದೆ!

ಸುತ್ತಲೂ ನೋಡಿದ ಬಿರುಕು ಬಿಟ್ಟಿರುವ ಗೋಡೆಗಳ ಸೀಳಿಕೊಂಡು ಗೆಳೆಯರು ಪ್ರೋಫೇಸರು ಒಂದಂತಾಗಿ ಬೆವರಿದ. ಹಾಲಿನ ಬಟ್ಟಲೊಂದಿಗೆ ಅಮ್ಮ ಬಂದು ಇವನ ಕಂಡು ಮತ್ತೇನಾಯ್ತೆಂದರು. ತಲೆ ಹಿಡಿದುಕೊಂಡಿದ್ದು ಕಟ್ಟೊಡೆಯಿತು. ವಿವರಿಸಿ ಹೇಳಿದ. ನಕ್ಕರು ಆಕೆ "ಹಿಡಿದುಕೊಂಡು ಹೋದರೆ ಹೇಳೋಕೆ ನಾ ಬರ್ತೀನಿ. ಏಗಿರಾಗಿ ನಿನ್ನ ಸರ್ಟಿಫಿಕೇಟ್ ಇದ್ದಾವಲ್ಲ ಸಾಕು ಒಕ್ಕಣ್ಣನಲ್ಲವೆಂದು ಸಾಬೀತು ಮಾಡಲು ಧೈರ್ಯ ತಗೊ........ ಸದ್ಯ ಹಾಲು ಕುಡಿ......." ಹೇಳಿ ಹೋದರು. ಹಾಲು ಗುಟುಕರಿಸಿದ ಹೌದು ಯಾಕಾಗಿ ಹೆದರಬೇಕು. ಹಾಗೊಂದು ವೇಳೆ ಹಿಡಿದುಕೊಂಡು ಹೋದರೆ ಜನರು ಬರುತ್ತಾರೆ. ಸರ್ಟಿಫಿಕೇಟ್ ಇವೆ, ಸಾಕಷ್ಟು ಧೈರ್ಯ ಬಂತು. ಸರ್ಟಿಫಿಕೇಟ್ ಎಂದಾಗ ನೆನಪಾತು. ಕರ್ನಾಟಕ ಕಾಲೇಜಿನಲ್ಲಿ ಪಾರ್ಟ್‌ಟೈಂ ಲೆಕ್ಚರರ ಹುದ್ದೆಗೆ ಅರ್ಜಿ ಕರೆದಿದ್ದಾರೆ ಹಾಕಬೇಕು. ಇಲ್ಲಿಯೇ ಲೆಕ್ಚರನಾಗಿ ಪಿಎಚ್‌ಡಿ ಮಾಡಬೇಕು.......

ಕಿಟಕಿಯಲ್ಲಿ ಇಣುಕಿದ ಮಳೆ ನಿಂತಿದೆ. ಭಿಕ್ಷುಕನ ಹೆಣ ಬಿದ್ದಿರಬೇಕು. ಹದ್ದುಗಳು ಕಾಣಿಸುತ್ತಿಲ್ಲ ನಿರಾಳದ ಉಸಿರು ಬಿಟ್ಟ.

---

## ಹುಟ್ಟಿದ ಹಬ್ಬ

● ದೇವು ಪತ್ತಾರ

ಎಲ್ಲರಂತಲ್ಲ ಇವನ ಹುಟ್ಟಿದ ಹಬ್ಬ
ಎಣ್ಣೆಯ-ಬಿಸಿ ನೀರ ತಲೆ ಸ್ನಾನ ಇವನಿಗಿಲ್ಲ
ಎದ್ದಾಗಲೇ ಆಕಾಶವನ್ನೇ ಹೊತ್ತ ಮುಖ
ಗೆಳೆಯರಿಂದ ಬಂಧುಗಳಿಂದ ಶುಭ ಹಾರೈಕೆಗಳಿಲ್ಲ
ಎದುರು ಬಂದಾಗ ತೋರಿಸುವ
ಕೃತಕ ನಗುವೂ ಇಂದು ಇವನಿಗಿಲ್ಲ
ಕೇಕು ಕತ್ತರಿಸುವದಿಲ್ಲ; ಸ್ವೀಟು ಹಂಚುವದಿಲ್ಲ
ವರುಷವೆಲ್ಲ ಖುಷಿಯಿಂದಿರುವವ
ಹುಟ್ಟಿದಬ್ಬದಂದು ತೀರಾ ವ್ಯಸನಿ.

# ಗಿರಿಜನ ನಾಡಿಗೆ ಪಯಣ

● ಶಿವರಾಮಯ್ಯ

ನೀವು ಯಾರಾದರೂ ಮಲೆನಾಡಿನ ಕಡೆಗೆ ಪಯಣ ಬೆಳೆಸುವುದಾದರೆ ನಮ್ಮ ಹಿ. ಚಿ. ಬೋರಲಿಂಗಯ್ಯನವರ "ಗಿರಿಜನ ನಾಡಿಗೆ ಪಯಣ" ಪುಸ್ತಕವನ್ನು ತಪ್ಪದೆ ಜೊತೆಗೆ ಕೊಂಡೊಯ್ಯಿರಿ. ಅದು ಮಲೆನಾಡಿಗೆ ಕೈಪಿಡಿ ಇಷ್ಟು ಪುಟ್ಟ ಪುಸ್ತಕದಲ್ಲಿ ಅಷ್ಟು ದೊಡ್ಡ ಮಲೆಯನಾಡು ಕಷ್ಟವಿಲ್ಲದಡಗಿದೆ. ಇತ್ತೀಚೆಗೆ ಉಪಸಂಸ್ಕೃತಿ ಪ್ರತಿಸಂಸ್ಕೃತಿ ಪರ್ಯಾಯ ಸಂಸ್ಕೃತಿ ಇತ್ಯಾದಿಯಾಗಿ ಸಂಸ್ಕೃತಿಗಳ ವಿಶೇಷ ಅಧ್ಯಯನ ರೂಪುಗೊಳ್ಳುತ್ತಿದೆಯಷ್ಟೇ. ಹಾಗೆ ಅಭ್ಯಾಸ ಮಾಡುವವರಿಗೆ ಇದೊಂದು ಅಪರೂಪದ ಪ್ರವಾಸ ಕಥನ ಇಲ್ಲಿ ನಿಸರ್ಗಕ್ಕೆ ಭಾವುಕನಾಗಿ ಸವಿಯುವ ಮನಸು ಒಂದು ಕಡೆಗಿದ್ದರೆ. ಅಲ್ಲಿ ಹುಳ ಹುಪ್ಪಟೆಗಳಿಗಿಂತಲೂ ಕೀಳಾಗಿ ಬದುಕುತ್ತಿರುವ ಗಿರಿಜನರ ಬದುಕಿಗೆ ಮಿಡಿಯುವ ಮನಸ್ಸು ಇನ್ನೊಂದು ಕಡೆಗಿದೆ.

"ಗಿರಿಜನ ನಾಡಿಗೆ ಪಯಣ" ಎಂಬ ಪುಸ್ತಕದ ಉದ್ದಕ್ಕೂ ನಮ್ಮನ್ನು ಸೆಳೆದಿಡುವ ಲೇಖಕರು ಘಟ್ಟಗಳಿಗೆ ಏರಿಸಿ, ಸಮ ಕಟ್ಟುಗಳಿಗೆ ಇಳಿಸಿ, ನದಿಗಳಲ್ಲಿ ಮೀಯಿಸಿ, ಸಮುದ್ರಗಳ ದರ್ಶನದಲ್ಲಿ ತನ್ಮಯರಾಗುವಂತೆ ಮಾಡಿ ಬಿಡುತ್ತಾರೆ. ಮಲೆಯನಾಡಿಗೆ ಮಳೆಯ ಬೀಡಿಗೆ ಸಿರಿಯ ಚೆಲುವಿನ ಕಣಿಗೆ ಹೋಗಲು ಮುಖ್ಯ ಪ್ರಚೋದನೆ ಈ ಕೃತಿ. ಕರ್ನಾಟಕವು ಹೆಮ್ಮೆ ಪಟ್ಟುಕೊಳ್ಳಬಹುದಾದ ಸುಂದರವೂ ಸಂಪದ್ಭರಿತವೂ ಆದ ಪ್ರದೇಶವೆಂದರೆ ಸಹ್ಯಾದ್ರಿ ಸಾಲು. ಇಂಡಿಯಾದ ಯಾವ ರಾಜ್ಯಕ್ಕೂ ಇಂಥ ಸೊಗಸಾಗಲಿ ಸಂಪನ್ನಾಗಲಿ ಇಲ್ಲಿ. ಬೆಟ್ಟ ನದಿ ಹಾಗೂ ಸಮುದ್ರಗಳು ಒಂದೇ ಕಡೆ ಮೇಳೈಸುವ ಚೋದ್ಯಗಳು ಬೇರೆಲ್ಲಿಯೂ ಇಲ್ಲ. (ಪುಟ ೭೦)

ಮುಗಿಲು ಮುಟ್ಟುವ ಮೊಗಿಲನೆ ಪರ್ವತ, ಕುದ್ರೆಮುಖ, ಚಾರ್ಮಾಡಿಯ ಪಾತಾಳಲೋಕ, ಗೋವರ್ಧನಗಿರಿ, ಕೊಡಗಿನ ಬೆಡಗಿನ ಬೆಟ್ಟ ಸಾಲು, ನದಿಗಳು, ಧುಮ್ಮಿಕ್ಕುವ ಜಲಧಾರೆಗಳು, ಅಘನಾಶಿನಿಯ ಅಲೆಗಳ ಒಡಲು, ಕುಡಗುಂಜಿ ದ್ವೀಪ, ಪಶ್ಚಿಮ ಸಮುದ್ರ ತೀರ ಇತ್ಯಾದಿಗಳು ಕಣ್ಣಿಗೆ ತಂಗುದಾಣಗಳು.

ಗಿರಿವನ ಪ್ರಿಯರಾದ ಹಿ. ಚಿ. ಬೋ. ಅವರಿಗೆ ಮಲೆನಾಡಿಗೆ ಟ್ರೆಕ್ಕಿಂಗ್ ಎಂದರೆ 'ಇದೆ ಮೊದಲೆಂಬಂತೆ' ಎಲ್ಲಿಲ್ಲದ ಉತ್ಸಾಹ. ಅವರ ಭಾವುಕ ಮನಸು ಹಾಗೂ ವಾಸ್ತವ ಪ್ರಜ್ಞೆ ಸದಾ ಒಂದನ್ನೊಂದು ಡಿಕ್ಕಿ ಹೊಡೆಯುತ್ತ ಸಮತೂಕ

ವನ್ನು ಕಾಪಾಡಿಕೊಳ್ಳುತ್ತವೆ. ನಿದರ್ಶನಕ್ಕಾಗಿ ಒಂದು ಸಂದರ್ಭವನ್ನು ಉಲ್ಲೇಖಿಸಬಹುದು. ಹಳಿಯಾಳದ ಹಾಸು ಹಾಸಿನ ಮಲೆನಾಡನ್ನು ವಸಂತ ಋತುವಿನಲ್ಲಿ ಕಂಡ ಅವರು ಮುಂದಿನ ಜನ್ಮದಲ್ಲಿ (ಅದು ಇದ್ದರೆ) ಮನುಷ್ಯನಾಗಿ ಅಥವಾ ಮರಿದುಂಬಿಯಾಗಿ, ಇಲ್ಲವೆ ಕೋಗಿಲೆಯಾಗಿ, ಬೇಡ ಹುಳ ಹುಪ್ಪಟೆಯಾಗಿಯಾದರೂ ಪಂಪನಂತೆ ಈ ಮಲೆನಾಡಿನಲ್ಲಿ ಹುಟ್ಟಬೇಕೆಂದು ಹಂಬಲಿಸುತ್ತಾರೆ (ಪುಟ ೧೦೬) ಆದರೆ, ಅದೇ ದಿನ ಈ ಕಾಡಿಗೆ ಬೆಂಕಿ ಬಿದ್ದು ಅವರ ಕಣ್ಣೆದುರಿಗೆ ಸರ್ವ ನಾಶವಾಗುತ್ತಿರುವ ಮಲೆನಾಡನ್ನು ನೋಡಿ ದೇವರೆ "ಮರಿದುಂಬಿಯಾಗಿ ಬೇಡ" ಯಾವುದಾಗಿಯೂ ಇಲ್ಲಿ ಹುಟ್ಟಿಸಬೇಡ ಎಂದು ಬೇಡಿಕೊಳ್ಳುತ್ತಾರೆ. (ಪುಟ ೧೧೫) ಹಲಸರು, ಹಾಲಕ್ಕಿ, ಒಕ್ಕಲಿಗರು, ಮಲೆ ಕುಡಿಯರು ಮುಂತಾದ ಗಿರಿಜನರು ವಾಸಿಸುವ ಪರಿಸರ, ಅಲ್ಲಿಯ ಬದುಕು ಅವರ ಸಂಸ್ಕೃತಿ ಇತ್ಯಾದಿಗಳನ್ನು ಅವರೊಂದಿಗಿದ್ದು ಉಂಡು ತಿಂದು ಕುಡಿದು ಆನಂದಿಸಿ ಅದರ ಅನುಭವವನ್ನು ಪುನರನುಭವಿಸುತ್ತ ಹೇಳುವ ಜೋರ್ಡೆನ್‌ಯ್ಯನವರು ಹೆಜ್ಜೆ ಹೆಜ್ಜೆಗೂ ಕುತೂಹಲ ಹುಟ್ಟಿಸುತ್ತಾರೆ. ಅವರ ವೇಷಭೂಷಣಗಳನ್ನು ವರ್ಣಿಸುತ್ತಾರೆ: ಆ ಹೆಣ್ಣುಮಕ್ಕಳ ನಿರಾಭರಣ ಸೌಂದರ್ಯವನ್ನು ಮೆಚ್ಚುತ್ತಾರೆ: ಹಾಲಕ್ಕಿಯವರ ಕುಣಿತಕ್ಕೆ ಅವರು ಅಡಿಕೆಗೊನೆ ಕೀಳುವ ಚಾತುರ್ಯಕ್ಕೆ ಬೆರಗಾಗುತ್ತಾರೆ.

ಐದು ಸಾವಿರ ಅಡಿಗಳ ಎತ್ತರದಲ್ಲಿ ಮನುಷ್ಯರಿದ್ದಾರೆ ಎಂಬುದೇ ಆಶ್ಚರ್ಯ ತರುವಾಗ ನೈಮಸ್‌ಲೋಬೋ ಎಂಬ ಒಂದು ಶತಮಾನ ಕಳೆದ (೧೮೮೩) ವೃದ್ಧ 'ಭೀಷ್ಮ'ನನ್ನು ಕಂಡಾಗ ಯಾರಿಗೆ ತಾನೆ ಕುತೂಹಲ ಬರುವುದಿಲ್ಲ. (ಪುಟ ೬೭) ಓದಿದ ಮಕ್ಕಳು "Please ಅಪ್ಪಾಜಿ ಅಲ್ಲಿ ಹೋಗಿ ಬರೋಣ" ಎನ್ನದೆ ಇರಲಾರರು.

ಉಡುಪಿ ಬಳಿ ಇರುವ ಹಿರಿಯಡ್ಕದ 'ಸಿರಿ' ಜಾತ್ರೆಯು ಅಳಿಯ ಸಂತಾನದ ಹಿಂದಿರುವ ಮಾತೃ ಪ್ರಧಾನ ಸಂಸ್ಕೃತಿಯನ್ನು ಬಿಂಬಿಸುತ್ತದೆ ಎಂಬುದನ್ನು ತುಳು ಪಾಡ್ದನವೆಂಬ ಜಾನಪದ ಕಥಾ ಐತಿಹ್ಯದ ಹಿನ್ನೆಲೆಯಲ್ಲಿ ಪತ್ತೆ ಮಾಡಿ ವಿದ್ವಾಂಸರು ಹೇಳುತ್ತಾರೆ. ಆದರೆ ಲೇಖಕರು ಇದಕ್ಕೆ ಬೇರೆಯಾದ ಕಾರಣಗಳನ್ನು ಹುಡುಕುತ್ತಾ ವರ್ಷ ಇಡೀ ಗಂಡನ ದಬ್ಬಾಳಿಕೆಗೆ ರೋಸಿ ಹೋದ ಹೆಣ್ಣುಮಕ್ಕಳು ಈ 'ಸಿರಿ' ಜಾತ್ರೆಯಲ್ಲಿ ಮೈದುಂಬಿ ಮಾತನಾಡುವ ಮೂಲಕ ತಮ್ಮ ನುಂಗಿಕೊಂಡ ನೋವನ್ನು ಹೊರ ಚೆಲ್ಲುತ್ತಾರೆ ಎಂದು ಅರ್ಥೈಸುವುದು ಉಚಿತವಾಗಿದೆ.

ಗೊಂಡರ ಕೋಗ್ರಿ ದೇವಸ್ಥಾನದಲ್ಲಿಟ್ಟಿರುವ ನಾಲ್ಕು ತಲೆ (ಬ್ರಾಹ್ಮಣ, ಮುಸ್ಲಿಂ, ನಾಪಿತ ಮತ್ತು ಮಂತ್ರವಾದಿ) ಗಳಿಗೆ ಇವರು ಸರಿಯಾದ ಭಾಷ್ಯವನ್ನೇ ಮಾಡುತ್ತಾರೆ. ಗೊಂಡರ ಸಾಂಸ್ಕೃತಿಕ ಹಾಗೂ ಸಾಮಾಜಿಕ ಬದುಕಿನ ಮೇಲೆ ಆತಾ

ಚಾರ ಮಾಡಿದ ಪ್ರತಿಷ್ಠಿತರನ್ನು ಪ್ರತೀಕಾರಾತ್ಮಕವಾಗಿ ಬಲಿ ತೆಗೆದುಕೊಂಡುದರ ಸಂಕೇತವೇ ಆ ಕಲೆಗಳಂತೆ ಸರಿ ನಾವು ಪ್ರೀತಿಸಿದರೆ ಜನರು ಹಿಂತಿರುಗಿ ನಮ್ಮನ್ನು ಪ್ರೀತಿಸುತ್ತಾರೆ ಎಂಬುದಕ್ಕೆ ಮಲೆಯ ಕುಡಿಯರು ಲೇಖಕರ ತಂಡವನ್ನು ದೇವಲೋಕದಿಂದ ಬಂದವರೊ ಎಂಬಂತೆ ನೋಡಿಕೊಂಡಿದ್ದೇ ಸಾಕ್ಷಿ. ಅವರ ಈ ಪ್ರೀತಿಗೆ ನೀತಿಗೆ ನಿಷ್ಠೆಗೆ ನಮ್ಮಲ್ಲಿ ಏನೂ ಇರಲಿಲ್ಲ. ಕೇವಲ ಕೈ ಮುಗಿಯುವುದನ್ನು ಬಿಟ್ಟು (ಪುಟ ೬೨) ನಮಗೂ ಅಷ್ಟೇ ಹೀಗೆ ಬರೆದವರಿಗೆ ಕೈ ಮುಗಿಯಬೇಕೆನಿಸುತ್ತದೆ!

ಗೊಂಡರ ನಾಡಿನಲ್ಲಿ ಲವಂಗದ ಕಿಚ್ಚು ಭಾಗವನ್ನು ಓದಿದ ಯಾರ ಹೊಟ್ಟೆಗೂ ಸಿಟ್ಟಿನ ಕಿಚ್ಚು ಏಳದೆ ಇರುವುದಿಲ್ಲ. ದಟ್ಟಾರಣ್ಯವನ್ನು ಸುಟ್ಟು ಕಡಿದು ಬೋಳಿಸಿ ಆ ಜಾಗದಲ್ಲಿ ಲಾವಂಚ ಮತ್ತು ಲೆಮನ್‌ಗ್ರಾಸ್ ಎಂಬ ಸುಗಂಧದ ಎಣ್ಣೆಯನ್ನು ಕೊಡುವ ಹುಲ್ಲು ಬೆಳಸಲಾಗುವುದು. ಭಟ್ಟಿ ಇಳಿಸಲು ಮತ್ತಷ್ಟು ಕಾಡು ನಾಶ. ಅದರಿಂದ ತೆಗೆದ ಎಣ್ಣೆಯನ್ನು ದೇಶ–ವಿದೇಶಗಳಿಗೆ ರವಾನಿಸಿ ಲಕ್ಷಾಂತರ ರೂ.ಗಳ ಲಾಭ ಗಳಿಸುವ ದಂಧೆ ಹೆಚ್ಚುಗುತ್ತಿದೆಯಂತೆ ಅಲ್ಲದೆ ಸುಗಂಧದ ದ್ರವ್ಯವನ್ನು ನೀಡುವ "ಧೂಮ" (ಧೂಪ)ದ ಮರಗಳಿಗೆ ಛೈರಿಗೆ ಹಾಕಿ ಅದನ್ನು ಸಂಗ್ರಹಿಸಿ ಪರಿಷ್ಕರಿಸಿ ಸುವಾಸನಾ ದ್ರವ್ಯವನ್ನು ತಯಾರಿಸಲಾಗುತ್ತದೆಯೆಂದೂ. ಆ ಮರಗಳು ಕ್ರಮೇಣ ಒಣಗಿ ನಿಂತಿವೆಯೆಂದೂ ವರದಿ ಇದೆ.

ಬಂಡೀಪುರ ದಾಟಿ ತಮಿಳುನಾಡು ಗಡಿಗೆ ಹೋದರೆ ಸಾಕು ಅರಣ್ಯ ಸಂಪತ್ತನ್ನು ಆ ರಾಜ್ಯ ಎಷ್ಟು ಚೆನ್ನಾಗಿ ರಕ್ಷಿಸಿ ಕೊಂಡಿದೆ ಎಂಬುದು ಯಾರಿಗಾದರೂ ಹೆಮ್ಮೆ ಎನಿಸುತ್ತದೆ. ಒಟ್ಟಾರೆಯಾಗಿ ನಮ್ಮ ಸರ್ಕಾರಕ್ಕೆ ಬೇಡ, ಜನರಿಗೆ ಅರಿವಿಲ್ಲ ಇನ್ನು ಮಲೆನಾಡು ಬೋಳಾಗದೆ ಉಳಿದೀತು ಹೇಗೆ? ಹಸಿರು ಕಾನನ ಕೊಂದ ವೀರಪ್ಪನ್ ತಳಗಳಿಗೆ ನಮ್ಮ ಕಾಡು ಸೂರೆ ಹೋಗುವುದನ್ನು ತಡೆಯುವರಾರು?.

"ಗಿರಿಜನ ನಾಡಿಗೆ ಪಯಣ" ಓದಿದ (ಅವರು ಹೊಸದಲು ಓದಬೇಕಷ್ಟೇ) ಯಾರೂ ಆ ಗಿರಿಜನ ನಾಡಿಗೆ ಪಯಣ ಬೆಳಸಬೇಕೆಂಬ ಉತ್ಕಟೇಚ್ಛೆಯನ್ನು ವ್ಯಕ್ತಪಡಿಸದೆ ಇರುವುದಿಲ್ಲ. ಇದಕ್ಕೆ ಕಾರಣ ಲೇಖಕರ ಸರಳ ಸುಂದರ ಶೈಲಿ. ನಿದರ್ಶನಕ್ಕೆ ಒಂದು ವಾಕ್ಯ "ಯಾವ ಗಿರಿಜನರ ಜೊತೆ ಒಂದೆರಡು ದಿನ ಹಾಯಾಗಿ ಕಳೆದು ಹೋಗೋಣ ಎಂದು ಬಂದೆವೋ, ಯಾವ ಗಿರಿಜನರ ಬಗ್ಗೆ ಸಾಂಸ್ಕೃತಿಕ ಅಧ್ಯಯನ ಮಾಡಲು ಬಂದೆವೋ ಆ ದ್ವೀಪ (ಕುಡಗುಂಡಿ) ಆ ಜನ ಎಲ್ಲರೂ ಯಾವುದೂ ನರಕ ಲೋಕದವರಂತೆ ಭಾಸವಾಗಿ ನಮ್ಮೆಲ್ಲರ ಉತ್ಸಾಹ ತುಂಬಿದ ಸಂತೋಷ ಕ್ಷಣ ಮಾತ್ರದಲ್ಲಿ ಛಿದ್ರವಾಗಿ ತೊಲಗಿತು" (ಪುಟ ೨೭) ಹಲವರ ಬದುಕನ್ನು ಚಿತ್ರಿಸುವ ವಾಕ್ಯವಿದು. ಈ ಮುಗ್ಧ ಜನರ ದೀನ ಬದುಕಿನ ಬಗ್ಗೆ ಮೋರಲಿಂಗಮ್ಮನವರಿಗೆ

ಎಲ್ಲಿಲ್ಲದ ವ್ಯಗ್ರತೆ ಇದೆ. ಬಂಜಾರು ಮಲೆಯ ಮಲೆ ಕುಡಿಯರನ್ನು ಯಾರಾದರೂ ನೋಡಬೇಕಾದರೆ ಮಂಗಳೂರಿನಲ್ಲಿರುವ ಆ ಎಸ್ಟೇಟಿನ ಮಾಲಿಕನ ಅಪ್ಪಣೆಬೇಕಂತೆ, ಹೊಳೆ ನೀರಿಗೆ ದೋಣಿ ನಾಯಕನ ಅಪ್ಪಣೆ ಏಕೆಂದು ಲೇಖಕರು ಪ್ರತಿಭಟಿಸುವುದು ಸಹಜವೇ. ಆದರೆ ನಮ್ಮ ವ್ಯವಸ್ಥೆಯಲ್ಲಿ ಏನೂ ಮಾಡುವಂತಿಲ್ಲವಲ್ಲ. ಅತಿಕ್ರಮ ಪ್ರವೇಶ ಮಾಡುವುದು ಶಿಕ್ಷಾರ್ಹವೂ ಹೌದು ಮಲೆಯ ಕುಡಿಯರನ್ನು ನೋಡಲು ಕಣಿವೆಯ ಒಳ ದಾರಿ ಬೇರೆ ಇದೆಯಂತೆ, ಬಂಜಾರು ಮಲೆಯ ಮಾಲಿಕನೆ ಏಕೆ ಯಾವ ಮಾಲಿಕನೂ ಅತಿಕ್ರಮ ಪ್ರವೇಶವನ್ನು ನಿರ್ಬಂಧಿಸುತ್ತಾನೆ. ಇಲ್ಲವಾದರೆ ಅಲ್ಲಿ ಆಗು ಹೋಗುವ ನಷ್ಟಕ್ಕೆ ಯಾರನ್ನು ಹೊಣೆ ಮಾಡಬೇಕು? ಊಳಿಗ ಮಾನ್ಯ ಪದ್ಧತಿ ಮಧ್ಯಯುಗಕ್ಕೆ ಇದ್ದುದಲ್ಲಿ ಈಗಲೂ ಉಂಟು. ಅದಿರಲಿ ಆದರೆ ಇರುವ ವ್ಯವಸ್ಥೆ ಯಲ್ಲಿ, ದಿನಕ್ಕೆ ೩-೨ ರೂ.ಗಳ ಕೂಲಿ ಪಡೆದು ದುಡಿಯುವ, ಇಂಥ ಜನರ ಬದುಕಿನ ಸುಧಾರಣೆ ಆಗಲೇ ಬೇಕೆಂಬುದರಲ್ಲಿ ಎರಡು ಮಾತಿಲ್ಲ.

ಇಲ್ಲಿ ಹೀಗೊಂದು ಕಲ್ಪನೆ ಮಾಡಬಹುದೆ? ನೋಡಿ, ಇದೇ ಎಸ್ಟೇಟ್ ಗಳನ್ನು ಅಲ್ಲಿ ಕೆಲಸ ಮಾಡುವ ಗಿರಿಜನರಿಗೆ ತುಂಡು ತುಂಡು ಮಾಡಿ ಹಂಚಿ ಬಿಡೋಣ ಆಗ ಏನಾಗಬಹುದು? ಈ ಜನ ಗೊಬ್ಬರ, ಗೋಡು, ಬೀಜ. ಔಷಧ ಮತ್ತು ಕಾವಲು ಇತ್ಯಾದಿಗಳನ್ನು ನಿಭಾಯಿಸಿಕೊಳ್ಳಬಲ್ಲರೆ? ಬೇಡ, ಇವರಿಗೆ ಬೇರೆ ಕಡೆ ಪುನರ್ ವಸತಿ ಕಲ್ಪಿಸಿದರೆ ಅವರು ಉಳಿಯಬಲ್ಲರೆ? ಗ್ಯಾರಂಟಿ ಇಲ್ಲ. ಹೋಗಲಿ ಈ ಯೋಜನೆ ಕಾರ್ಯಗತವಾಯಿತೆಂದರೆ ಮಲೆನಾಡಿನ ಏಲಕ್ಕಿ, ಮೆಣಸು, ಅಡಿಕೆ ಮುಂತಾದ ವಾಣಿಜ್ಯೋತ್ಪನ್ನ ಉದ್ಯಮಗಳ ಗತಿ ಏನಾದೀತು? ಮತ್ತು ಇದನ್ನು ಅವಲಂಬಿಸಿರುವ ಭಾರತದ ಆರ್ಥಿಕ ಸ್ಥಿತಿಗತಿಯ ಮೇಲೆ ಏನೇನು ಪರಿಣಾಮ ವಾದೀತು ಎಂಬುದನ್ನು ನಾವು ಯೋಚಿಸಬೇಕಾಗಿದೆ. ಸಾರಾಂಶವಾಗಿ ಇಷ್ಟು, ಇವತ್ತಿನ ಫ್ಯೂಡಲ್ ಮತ್ತು ಬಂಡವಾಳಶಾಹಿ ವ್ಯವಸ್ಥೆಗಳು ತಮ್ಮ ಬೇರನ್ನು ಎಷ್ಟು ಆಳಕ್ಕೆ ಇಳಿಸಿವೆ ಎಂಬುದರ ಅರಿವು ಈ "ಗಿರಿಜನ ನಾಡಿಗೆ ಪಯಣ" ಮುಂತಾದ ಪುಸ್ತಕಗಳಿಂದ ಬಂದರೆ ಸಾಕು.

ಇನ್ನು ನಮ್ಮ ಕಲೆ ಸಾಹಿತ್ಯದ ಕಡೆಗೆ ಹೊರಳಿದರೆ ತನ್ನ ಸುತ್ತಲಿರುವ ಜನ ಸಾಮಾನ್ಯರ ಬದುಕನ್ನು ಇತಿಹಾಸಕಾರರು ಕಿಗ್ಗಣ್ಣಿನಲ್ಲಿ ಕಿಸಿದು ನೋಡಲಿಲ್ಲ. ನಮ್ಮ ರಾಷ್ಟ್ರೀಯ ಕಾವ್ಯಗಳೆನಿಸಿದ ರಾಮಾಯಣ, ಮಹಾಭಾರತಗಳು ಇಂಡಿಯಾದ ಗೊಂಡಾರಣ್ಯಗಳನ್ನು ವೈಭವೋಪೇತ ಸಂಸ್ಕೃತ ಶೈಲಿಯಲ್ಲಿ ವರ್ಣಿಸುವುದರಲ್ಲಿಯೇ ಮೈಮರೆತು ಅದರೊಳಗೆ ಕ್ರಿಮಿಕೀಟಗಳಿಗಿಂತಲೂ ನಿಕೃಷ್ಟವಾದ ಬದುಕನ್ನು ಸಾಗಿಸು ತ್ತಿರುವ ಜನರು ಕಣ್ಣಿಗೆ ಬೀಳಲೇ ಇಲ್ಲ. ಶಂಬೂಕ, ಏಕಲವ್ಯ, ವಾಲಿ ಮುಂತಾದ ವರು ಕಂಡರೂ ವೈದಿಕ ವೀರರ ಸಾಹಸಗಳನ್ನು ಮೆರೆಸಲು ಪೋಷಕವಾಗಿ ಪ್ರಾಣ ತೆರಲು ಮಾತ್ರ. ಹನುಮಂತ, ಸುಗ್ರೀವ, ಜಾಂಬುವಂತ ಮುಂತಾದ ವಾನರ ವೀರರು

ಶ್ರೀರಾಮನ ಎದುರ ಬಾಲ ಅಳ್ಳಾಡಿಸುವ ಗುಲಾಮರಷ್ಟೇ. ಕುವೆಂಪು ಸಾಹಿತ್ಯ ಮಾತ್ರ ಇಂಥ ಬಡ 'ಕರಿಸಿದ್ದ ಗಿಡ್ಡಿ'ಯರನ್ನು ಗುರ್ತಿಸಿ ಮಾನ್ಯ ಮಾಡಿದ್ದು ನಮ್ಮ ಚಿತ್ರ ಕಲಾವಿದರಿಗೆ ಕಾಣುವುದು ಆಗುಂಬೆಯಲ್ಲಿ ಮುಳುಗುವ ಸೂರ್ಯ ಮಾತ್ರ. (ನೋಡಿ ಬೆಂಕಿ ಮತ್ತು ವಿದ್ಯುತ್ ಯುಗಗಳ ನಡುವೆ. ಹಿ. ಚಿ. ಬೋರಲಿಂಗಯ್ಯ, ಸಿರಿಗನ್ನಡ ವಸಂತ ಸಂಚಿಕೆ ೧೯೯೩. ಕನ್ನಡ ವಿಶ್ವವಿದ್ಯಾಲಯ ಹಂಪೆ.)

ಜಾನಪದ ಅಕಾಡೆಮಿಯು ಹಮ್ಮಿಕೊಂಡ ಕ್ಷೇತ್ರ ಕಾರ್ಯಕ್ಕೆ ಸಂಬಂಧಿಸಿದ ಇಂಥ ಪುಸ್ತಕವನ್ನು ಆ ಅಕಾಡೆಮಿಯೇ ಯಾಕೆ ಪ್ರಕಟಿಸಲಿಲ್ಲವೊ ಒಂದು ಸೋಜಿಗ! ಕಡೆಯದಾಗಿ ಇನ್ನೊಂದು ಮಾತು, ತೇಜಸ್ವಿಯರ ಕಥೆ ಕಾದಂಬರಿಗಳು, "ಗಿರಿಜನ ನಾಡಿಗೆ ಪಯಣ" ಮುಂತಾದ ಕೃತಿಗಳು ಪರಿಸರದ ಅರಿವು ಮೂಡಿಸುವ ಶೈಕ್ಷಣಿಕ ಮೌಲ್ಯವನ್ನುಳ್ಳ ಪುಸ್ತಕಗಳು ಇಂಥವುಗಳನ್ನು ಶಾಲಾ-ಕಾಲೇಜುಗಳಿಗೆ ಪಠ್ಯ-ಪುಸ್ತಕಗಳನ್ನಾಗಿ ಆರಿಸಬೇಕು. ಮತ್ತು ಎಂಥದೊ ಪ್ರೇಮ ಕಾಮಗಳಲ್ಲಿಯೇ ಸುತ್ತು ಹಾಕುವ, ಬ್ರಾಹ್ಮಣ ಕುಟುಂಬಗಳ ವಾಸನೆ ಹೊಡೆಯುವ ಪಠ್ಯ-ಪುಸ್ತಕಗಳನ್ನು ಆರಿಸುವ ಪ್ರಕ್ರಿಯೆ ಇನ್ನಾದರೂ ನಿಲ್ಲಬೇಕು.

---

## ಸಾದರ ಸ್ವೀಕಾರಕ್ಕೆ ಬಂದ ಪುಸ್ತಕಗಳು

● ಸುರೇಂದ್ರ ಕರವುಗಿ

**'ರೆಕ್ಕೆ ಮೂಡಿದಾಗ' ಮತ್ತು 'ಬೆಳ್ಳಿ' : ಡಾ|| ಬಸವರಾಜ ಸಬರದ**

ಬೆಲೆ ೨೦ ರೂ. ಗ್ರಿನೋಬಲ್ಸ್ ಪ್ರಕಾಶನ ಕಲಬುರ್ಗಿ-೪

ಡಾ||ಬಸವರಾಜ ಸಬರದವರ 'ರೆಕ್ಕೆ ಮೂಡಿದಾಗ' ನಾಟಕ ವಸ್ತುವಿನ ದೃಷ್ಟಿಯಿಂದ ಗಮನಾರ್ಹವಾಗಿದೆ. ಭ್ರಷ್ಟಗೊಂಡ ರಾಜಕೀಯದ ಚದುರಂಗದಾಟ ಇಲ್ಲಿದ್ದರೂ ಜನ್ನನ ಯಶೋಧರ ಚರಿತೆ, ಆಧಾರಿತ ಅಮೃತ ಮತಿಯ ಪ್ರಣಯ ಬದುಕಿನ ಮೂಲ ಆಶಯದೊಂದಿಗೆ ವಿಮೋಚನಾಳ ಬದುಕನ್ನು ತಳುಕು ಹಾಕಿಸಿ ನಾಟಕಕಾರ ಹೊಸ ಅರ್ಥ ಕಲ್ಪಿಸಿದ್ದಾರೆ. ಓದುಗರೊಡನೆ ಜೀವಂತಿಕೆಯ ಸಂಬಂಧ ಏರಿಸಿ ಕೊಳ್ಳಲು ನಾಟಕದಲ್ಲಿ ವಿಶಿಷ್ಟ ತಂತ್ರ ಬಳಸಿ ಸೂತ್ರಧಾರನಿಗೂ, ಪಾತ್ರಧಾರಿ ಗಳಿಗೂ ಹೊಸ ಆಯಾಮ ಒದಗಿಸಿ ಕೊಟ್ಟರೂ ಅಗ್ಗದ "ಅಶ್ಲೀಲ ಶ್ಲೇಷಾರ್ಥ" ಹೊರಡಿಸಿರುವುದು ಸುಸಂಸ್ಕೃತ ಓದುಗರಿಗೆ ಮುಜುಗರ ಉಂಟು ಮಾಡುತ್ತದೆ. ಆದರೀ ನಾಟಕದ ಜೀವನ ದರ್ಶನ, ನೇಪಥ್ಯದ ಹಿಂದಿನ ಸತ್ಯ ಮಾತ್ರ ವ್ಯವಸ್ಥೆಯ ಬಗೆಗೆ ಚಿಂತಿಸುವಂತೆ ಮಾಡುತ್ತದೆ.

ಇದೇ ಕೃತಿಯ ಎರಡನೆಯ ಬದಿಗೆ ಮೂಡಿ ಬಂದ 'ಬೆಳ್ಳಿ' ನಾಟಕ ಸಮಸ್ಯಾ ಪ್ರಧಾನವಾದದ್ದು. ಧರ್ಮ ದೇವರ ಹೆಸರಿನಲ್ಲಿ ಎಳೆಯ ಹದಿ ಹರೆಯದ

ಹೆಣ್ಣುಗಳನ್ನು "ಬಸವಿ" ಬಿಟ್ಟು ಲಿಂಗನಗೌಡನಂಥ ಗೋಮುಖ ವ್ಯಾಘ್ರ ಕಾಮ ತೃಪ್ತಿಗೆ ಬಳಸಲು ಪೂಜಾರಿ, ರಾಮಾಚಾರಿಯಂಥವರು ನಡೆಸುವ ಪ್ರಯತ್ನ ಇಲ್ಲಿದೆ. ಮುತ್ತು ಕೊಡತಾರ. ಸತ್ತು ಕೊಡತಾರ, ಜೆಂಡ ಹೂವಿನ ದಂಡಿ ಕಟ್ಟತಾರ ಕೊಡತಾರೇನ ಕಳದ ಹೋದ ಬದುಕ? ಎಂದು ಪ್ರಶ್ನಿಸುವ ಬೆಳ್ಳಿ ಕೊನೆಯಲ್ಲಿ ಶೇಖರಪ್ಪನಂಥ ಶಿಕ್ಷಕ ಹಾಗೂ ಪೋಲೀಸರ ರಕ್ಷಣೆಯಿಂದ ಮಾನ ಕಾಪಾಡಿ ಕೊಳ್ಳುವುದು ಇಲ್ಲಿನ ವೈಶಿಷ್ಟ್ಯ ಸಂಭಾಷಣೆ ಹಾಗು ವಿಶಿಷ್ಟ ಶೈಲಿಯಿಂದ 'ಬೆಳ್ಳಿ' ಗಮನ ಸೆಳೆಯುತ್ತದೆ.

---

## ಮರೆಯಾದ ಪುಂಡ !

● ಶ್ರೀನಿವಾಸ ಜಾಲವಾದಿ

(ದಿ. ೧೮-೮-೯೩ ರಂದು ದುರ್ಮರಣಕ್ಕೀಡಾದ ಗೆಳೆಯ ಪುಂಡಲೀಕಶೇಟ್‌ಗೆ ಅಶ್ರುತರ್ಪಣ)

ಶಾಸಕರ "ಕಾರು-ಬಾರ"ಗಳನ್ನು
ಮಂತ್ರಿಗಳ ಮನೆ ಮುರುಕರ
ಕಂತ್ರಿ ಕೆಲ್ಸಗಳನ್ನು
"ರಿನ್" ಸಾಬೂನ ಹಚ್ಚಿ
ನವಿರು ವ್ಯಂಗದಲ್ಲಿಯೇ ತೊಳೆದು
ಆರಲು ಒಣ ಹಾಕುತ್ತಿದ್ದ
"ಹುಬ್ಬಳ್ಳಿಯಾಂವಾ" ಬರಲಿಲ್ಲವೇಕಿನ್ನೂ?
ಸ್ನೇಹದ ಹುಚ್ಚಿನ ಈ
ವ್ಯಂಗ ಸರದಾರ,
ಗಂಡು ಮೆಟ್ಟಿನ ನಾಡಿನ ಈ
ಭಾಷಾ ಬಹದ್ದೂರ;
ಕುಣಿಯೋಣು ಬಾರಾ ಎಂದೆಲ್ಲಿ ಮರೆಯಾದ?
ಬಾ ಪುಂಡಲಿಕಾ ನೀನೇಕೆ 'ಶೇಟ್' ಗೊಂಡ!

ಕಾಲಽನ ಕರೆಗೆ ಓಗೊಟ್ಟು,
ಕಡಲ ದಡದಿಂದ, ತೆರೆ ತೆರೆಯ ಮೇಲಿಂದ
ನಡೆ ನಡೆದು ಹೋದ, ಕಡೆ ಕಡೆದು ಕೊಟ್ಟ ವ್ಯಂಗ !

ಎಲ್ಲಿತ್ತು, ಯಾವಾಗ ಕಾದಿತ್ತು
ಖೂಳ ಸಾವು ನಿನ್ನ ಮೇಲೆರಗಿತಲ್ಲಾ
ಹಾಸ್ಯರಸದ ತಂತಿ ಕಡಿದು ಹೋಯ್ತಲ್ಲಾ
ಇನ್ನೇಕೆ ಮನಸು, ಕೊಡಲೇನು ಸೊಗಸು
ಆಟಕ್ಕೆ ಕೊನೆಯಾಯಿತಲ್ಲಾ ?
ಕನಸ್ಸೂ ಹೆಮ ಹೊರಾಗಿ ಹೋಯಿತಲ್ಲಾ !

---

## ಸಿಕ್ಕು

● ಶಂಕರಯ್ಯ ಆರ್. ಘಂಟಿ

ಇತ್ತೀಚಿನ ಹಗಲುಗಳಲ್ಲಿ ಸಾಯುತ್ತಿದ್ದೇನೆ.
ಸಂಜೆ ಭಾವನೆಗಳು ಕೆಣಕುತ್ತವೆ
ಕನಸಿನ ಕಾರಂಜಿ ಪುಟಿಯುತ್ತದೆ
ಮತ್ತೆ ಬದುಕುತ್ತೇನೆ ರಾತ್ರಿ ಮಾತ್ರ

ಬೆಳಗು ಬೈಗಿನ ಮುಖವಾಡಗಳೊಂದಿಗೆ
ರಾತ್ರಿಯ ನಿಶೆ
ಸಿಂದಿಯೊಂದಿಗೆ ಸಂಧಿ ಮಾಡಿಕೊಳ್ಳುತ್ತ
ಬಿಟ್ಟಿ ಸಿಕ್ಕರೆ
ಗಟಾರವನ್ನೇ ಗುಟುಕರಿಸುತ್ತ
ತೂಕಡಿಸುತ್ತವೆ ಹಲ್ಕಟ್ ಚಟಗಳು
ಆಗ
ಹಿಂದಿನ ದಿನಗಳ ಬಗ್ಗೆ ಮನಸ್ಸಿನ ಮೆಲುಕು

ಒಬ್ಬ ರಾಜನಿಗೆ ಹಲವು ಚಮಚಾ ಕವಿಗಳಂತೆ,
ಕೋಗಿಲೆ ಹಾಡುತ್ತಾವಂತೆ
ನವಿಲು ಕುಣಿಯುತಿದ್ದವಂತೆ,
ರಾಜ್ಯದ ಜನ ಸುಖವಾಗಿದ್ದರಂತೆ
ಇವರ ಪಿಂಡ.......! ಇವರಿಗೇನು ಗೊತ್ತು?
ನಮ್ಮ ಸುಖವನ್ನು....ಸ್ವಾತಂತ್ರ್ಯದ ಹೊಗಲೇ
ಪರಕೀಯರು ದೋಚಿ ದಕ್ಕಿಸಿಕೊಂಡ್ರಂತೆ....?

ಇಂದು ನನ್ನ ಒಡಕು ದಿನಗಳೇ
ಮುರುಕು ಮನೆಯು
ಚಿಂದಿ ಬಟ್ಟೆಯಲ್ಲಿ ಒದ್ದಾಡುವಾಗ
ಹರಕು ಚಾದರಿನಲ್ಲಿ ಕಾಲು ಸಿಕ್ಕಿಸಿಕೊಂಡ ಮಗಳು
ನಾ.... ಎಲ್ಲೋSS ನಮ್ಮಪ್ಪಾ
ಮೊದಲs ನನ್ನ ಕಾಲ ಬಿಡಸೆಂದು ಕಿರುಚುವುದು
ವಾಸ್ತವ.

ಸಿಗದ ಹಗಲುಗನಸುಗಳನ್ನು
ರಾತ್ರಿಗೆ ಮಾರಿಕೊಂಡು
ಬೆಳಗಿನ ಸಕ್ಕರೆ ನಿದ್ದೆಯಲಿ
ಈಕೆ........ ಎಬ್ಬಿಸುತ್ತಾಳೆ
ರೀ....! ಏಳ್ರಿ........ ನಳಾ ಹೋಗ್ತಾವು
ಏಳ್ರಿನ್ನs........ಹಾಲ ಮುಗಿತಾವು
ಲೇಟಾದ್ರ ಚಿಮಣಿ ಎಣ್ಣಿ ಸೈತ ಸಿಗೊದಿಲ್ಲ
ಪೆಂತೆಂತಾ ದಿನಮಾನ ಬಂದುವೂ ಶಿವನs !
ಆಗ............. ಮನೆಗಷ್ಟೇ ಪ್ರಧಾನಿನಾ
"ಏ" ?! ಏನಾಗೆದ ನಿನಗೆ?
ಯಾಕ? ಸೆಂಟ್ರಲ್ ಬಜೆಟ್‌ನ್ಯಾಗ
ಚಿಮಣಿ ಎಣ್ಣಿದೊಂದ ದರ ಕಡಿಮ್ಯಾಗಿದ್ದು ಸಾಕಾಗಿಲ್ಲಾ?
ಹಿಂಗಂದು ಸರ್ಕಾರದ ಇಜ್ಜತ್ ತೆಗಿಬ್ಯಾಡಗೇ
ಇತ್ತಿತಲಾಗ ಕಾನೂನು ಭಾಳ ಭಾರೀಕ ಬಂದಾವು
ಹೂಂ ಹೂಂ ! ಕಾನೂನು ಬಾಳ ಬಾರೀಕ ಬಂದಾವ
ಮತ್ತೆ ರಾತ್ರಿ
ರೆಪ್ಪೆಗೆ ರೆಪ್ಪೆ ಥಳಕು ಹಾಕುವಾಗ
ಬಣ್ಣದ ಕನಸುಗಳು ಮುತ್ತಿಗೆ ಹಾಕುತ್ತವೆ
ಮುತ್ತಿನ ರಮನೆ ತುಂಬಾ ನಾನೇ ರಾಜ
ನನ್ನನ್ನಾಳುವವ ಕೋತಂಬರಿ ಬೀಜ
ಇದು ಕನಸು,

ವರ್ತಮಾನದಲಿ ಎಲ್ಲಾ ಚೆಲ್ಲಾ ಪಿಲ್ಲಿ,
ನಾನೇ ಕಂಡ ನನ್ನ ಆಸೆಯ ಕನಸುಗಳು
ವಾಸ್ತವದಂಗಳದಲ್ಲಿ ಮಂಗ ಮಾಯ

ಕಾನ್ವೆಂಟ ಕಂದ ಅರಚುತ್ತದೆ
ಅಪ್ಪಾ........ ಹೋಮ್‌ವರ್ಕ ಬುಕ್ ಬೇಕು....
ಈಕೆ ಕಿರುಚುತ್ತಾಳೆ
ಅಪ್ಪಿ........"ರೊಕ್ಕಾ ಈಸ್ಕೊಂಡು ಚಾಪುಡಿ ತುಗೊಂಬಾ"
ಇದು ವಾಸ್ತವ

ಬೆಳಿಗ್ಗೆ ಪೇಪರಿನ ವರ್ತಮಾನದಲಿ ಭಾರೀ ಸುದ್ದಿ....
"ಭಾರತಿಯ ವಸ್ತ್ರಾಭರಣಗಳನ್ನು" ವತ್ತೆ ಇಡಲಾಗಿದೆ
ನಾಳೆ ನಮ್ಮ ನಿಮ್ಮನ್ನು ಪರಾಜಿಗಿಟ್ಟಬಹುದು
ಇಲ್ಲಾ .... ಮಾರಾಟ ಮಾಡಬಹುದು
ಅಥವಾ............
ನಮ್ಮ ವಂಶಜರೇ ಬೇಕೆಂದು
ಇನ್ನೊಬ್ಬರೆದೆಗೆ ಗುಂಡಿಡಬಹುದು
ಮತ್ತೊಬ್ಬ ಹಿಟ್ಲರ್ ಇಲ್ಲಿ .... ಇಲ್ಲೇ ಜನಿಸಬಹುದು
ಇಲ್ಲಿ ಕೇಳವರಿಲ್ಲಾ....ಕಿಸಿಯುವರಿಲ್ಲಾ !

ನಮ್ಮ ತನವನ್ನು ಮೇಲಿನವರಿಗೆ ಮಾರಿಕೊಂಡು
ವರ್ತಮಾನಕ್ಕೆ ಮುಖ ಒಡ್ಡದ ನಾವು
ಪ್ರಕೃತಿ ಕನಸಿನ ಸಾಮ್ರಾಜ್ಯದಲ್ಲೇ ಇದ್ದೇವೆ
ಕಹಿ ವಾಸ್ತವವನ್ನೇ ಮಾರಾಟ ಮಾಡುವ
ನಮ್ಮನ್ನಾಳುವ ನಮ್ಮ ಜನ
ನಮ್ಮೊಟ್ಟಿಗೇ ಇದ್ದು........ ನಮ್ಮವರಾಗುತ್ತಾರೆ

ಚಲಿಸುತ್ತಿದ್ದೇನೆ ದಾರಿ ಸುಗಮವಿಲ್ಲ
ಸಾವಿರ ನೋವಿನೊಂದಿಗೆ ಕೊಸರಾಡಿದ್ದೇನೆ
ಬಿಗಡಾಯಿಸಿದ ಬದುಕು ಸರಳವಾಗುತ್ತಿಲ್ಲ
ಇತ್ತೀಚಿನ ಹಗಲುಗಳಲ್ಲಿ ಸಾಯುತ್ತಿದ್ದೇನೆ
ಯಾಕಂದ್ರ........
ಇಲ್ಲಿ ಕೇಳುವರಿಲ್ಲ.... ಕಿಸಿಯುವರಿಲ್ಲ....!

# ಕಟ್ಟುಗೆಯ ಘಂಟಿ

● ಡಾ॥ ಕಾಶೀನಾಥ ಅಂಬಲಗೆ

( ಭುಲಾಯಿ ಹಾಡು )

ಕನಸಿನ ಕಾಡಿಗೆ ಮಾಡಿ
ಬೆಳದಿಂಗಳ ಬಿಂದಿಯು ಮಾಡಿ
ನಗತಾಳ ಕನಸ್ಯಾಗ ನೋಡಿ ॥ಕೋಲಣ್ಣ ಕೋಲ॥

ಉದ್ದುದ್ದ ಕೂದಲ ಜಡಿ
ಮಲ್ಲಿಗೆ ಮಾಲೆಯ ಮಾಡಿ
ಮುಡಿದಾಳ ಪ್ರೀತಿ ಮಾಡಿ ॥ಕೋ॥

ಮುಗುಳ್ನಗಿ ಮೂಗತಿ ಹಾಂಗೆ
ನಾಚಿಕಿ ನತ್ತಿನ ಹಾಂಗ
ನಾಜೂಕು ಗುಲಾಬಿ ಹಾಂಗ ॥ಕೋ॥

ಈ ಬಾಲಿ ಬೆಣ್ಣ ಹಾಂಗ
ಕನಸಿನಾಗ ರಾಣಿ ಹಾಂಗ
ರಾಯನ ಕುದುರಿ ಹಾಲಿನ್ಹಾಂಗ ॥ಕೋ॥

ಕಣ್ತುಂಬ 'ಅವನೆ' ಬೆಳಕಿನ ಹಾಂಗ
ಏರಿ ಬಂದ ಬಿರುಗಾಳಿ ಹಾಂಗ
ಮೈ ಎಲ್ಲ ಪ್ರೀತಿ ಸುತ್ತಿದ್ಹಾಂಗ ॥ಕೋ॥

ಪ್ರೀತಿನೇ ಮೈವೆತ್ತಿದ್ಹಾಂಗ
ಬಂದ ಮನಸು ಎರಡು ದೇಹದ್ಹಾಂಗ
ಕೂಡ್ಯಾರ ಹಾಲು ಸಕ್ಕರಿ ಹಾಂಗ ॥ಕೋ॥

ಮದುವೆ ಆಗಿ ಬಂದಾಳ
ಹೊಸ ಮನಿ ತುಂಬ್ಯಾಳ
ಮನಸ ತುಂಬ ಪ್ರೀತಿ ಬೆಳದಿಂಗಳ ॥ಕೋ॥

ದಶದಿಕ್ಕಿಗಿ ಅತ್ತಿ ಹೆಸರ
ನಾದಿನಿ ಮತ್ತ ಮೈದುನರ
ಪ್ರೀತಿ ಕಣ್ಣಾಗ ಕೆಸರ ॥ಕೋ॥

ಧನ ದೌಲತ ಕೇಳ್ತಾರ
ನಗ್ತಿ ಯಾಕಂತ ಬಯ್ತಾರ
ಕಣ್ಣಿಟ್ಟರ ಸೇರದವರ ॥ಕೋ॥

ಕಣ್ಣಿಟ್ಟರ ಸೇರದವರ
ಅತ್ತಿ ಮತ್ತ ನಾದಿನೇರ
ಹೆಣ್ಣಿಗೆ ಹೆಣ್ಣೆ ಮುಳ್ಳಾಗ್ತಾರ ॥ಕೋ॥

ಮನಿ ಮಂದಿ ಕೂಡ್ಯಾರ
ಚಿಮಣಿ ಎಣ್ಣಿ ಸುರದಾರ
ಬೆಂಕಿ ಓಕಳಿ ಆಡ್ಯಾರ ॥ಕೋ॥

ಬಾಲಿಯು ಬದುಕು ಹೀಂಗಾದ
ಕನಸು ಸುಟ್ಟು ಕರಕಾಗ್ಯಾದ
ಕೋಗಿಲೆ ಹಾಡು ಸುಟ್ಹೋಗ್ಯಾದ ॥ಕೋ॥

ಸೊಸಿಗಿ ಇವ್ರು ಸುಟ್ಟಾಕ್ಯಾರ
ಎದಿ ಎದಿ ತಾ ಬಡ್ಕೋತಾರ
ರಕ್ತ ಬೀಜದ ವಂಶದವರ ॥ಕೋ॥

ಮಲ್ಲಿಗೆ ಮೊಗ್ಗು ಸುಟ್ಹೋಯ್ತು
ಬೆಳದಿಂಗಳ ಬಿಸಿಲ ಆಯ್ತು
ಮುಗುಳ್ನಗು ಹೆಣ ಆಯ್ತು ॥ಕೋ॥

ಸಿಟ್ಟೊಂದು ಸೆಡುವೊಂದು
ಜಬರ್‌ದಸ್ತಿನ ಮಾತೊಂದು
ಎದುರು ನಿಲ್ಲುವ ಛಾತಿವೊಂದು ॥ಕೋ॥

ಆಕಿಗಿದ್ದರ ಗಟ್ಟಿ ಮನಸ
ಮೆಟ್ಟಿ ನಿಲ್ಲೋ ಹುಮ್ಮಸ
ಸತ್ತಿತೇನ ಆಕಿ ಕನಸ ॥ಕೋ॥

# ಇಲ್ಲೊಬ್ಬ ಕವಿ

● ವಿಕ್ರಮ ವಿಸಾಜಿ

ಇಲ್ಲೊಬ್ಬನು,
ತಾನು ಕುವೆಂಪು ಆಗಬೇಕೆಂದು
ಇಲ್ಲಿಂದ ಮಲೆನಾಡಿಗೆ ಹೋಗಿ
ಅವರು ಹೊರಳಾಡಿದ
ನೆಲದ ಮೇಲೆಲ್ಲಾ ಹೊರಳಾಡಿ

ಅವರು ತಿರುಗಾಡಿದ ಕಾಡಿನಲ್ಲೆಲ್ಲಾ
ತಿರುಗಾಡಲು ಹೋಗಿ
ಮುಳ್ಳು ನಟ್ಟಿಸಿಕೊಂಡು ಬಂದಿದ್ದಾನೆ.

ಕುವೆಂಪು ಆಗುವುದು ಕಷ್ಟವೆಂದು
ಅಡಿಗ ಆಗಲು ಪ್ರಯತ್ನಿಸಿ
ತಾನೂ ಒಂದು ಪತ್ರಿಕೆ ತೆಗೆದು
ಮೈಯೆಲ್ಲಾ ಸಾಲ ಮಾಡಿಕೊಂಡಿದ್ದಾನೆ.

ಅಡಿಗರ ಸಹವಾಸ ಸಾಕೆಂದು
ವರಕವಿ ಬೇಂದ್ರೆ ಆಗಬೇಕೆಂದು
ಅವರ ಹಾಗೆ ಮಾತಾಡುತ್ತಿರಬೇಕೆಂದು
ಧಾರವಾಡದ ರಸ್ತೆಯಲ್ಲೆಲ್ಲಾ
ಮಾತಾಡುತ್ತ ತಿರುಗುತ್ತಿರುವಾಗ
ಯಾರೋ ಪಡ್ಡೆ ಹುಡುಗರಿಂದ
ಹುಚ್ಚನೆಂದು ಹೊಡೆಸಿಕೊಂಡು ಬಂದಿದ್ದಾನೆ.

ದಯವಿಟ್ಟು ಬನ್ನಿ,
ಇವನಿಗೆ ತಾನು ತಾನಾಗುವದೆಂತು
ಎಂಬುದನ್ನು ಕಲಿಸೋಣ.

# ಅಪರಿಚಿತ

 ಎಚ್. ಬಾಷ ಸಾಹೇಬ್

ಜಮಖಂಡಿ–ಹೈದರಾಬಾದ ಬಸ್ಸು ಮುಲ್ಲಾ ಬಸ್ ನಿಲ್ದಾಣ ಬಂದು ಮುಟ್ಟಿದಾಗ ರಾತ್ರಿ ಹನ್ನೊಂದುವರೆ ಗಂಟೆ. ಸಿಂದಗಿಯಲ್ಲಿ ಬಸ್ಸು ಪಂಕ್ಚರ ಆಗಿದ್ದರಿಂದ ಇಷ್ಟು ತಡವಾಗಿತ್ತು. ಇಲ್ಲದಿದ್ದರೆ ಒಂಭತ್ತು ಗಂಟೆಗೆ ಬರುತ್ತಿತ್ತು. ಭಾರವಾದ ಸೂಟಕೇಸಿನೊಂದಿಗೆ ಶಾಂತಾ ಬಸ್ಸಿನಿಂದ ಇಳಿದಾಗ ಬಸ್ ನಿಲ್ದಾಣದಲ್ಲಿದ್ದ ಸಣ್ಣ-ಸಣ್ಣ ಹೋಟಲ್‌ಗಳು ಅಂಗಡಿಗಳು ಮುಚ್ಚಿದ್ದು ಎಲ್ಲಾ ನಿರ್ಜನವಾಗಿತ್ತು. ಬಸ್ಸು ಎಂದಿನಂತೆ ಒಂಭತ್ತು ಗಂಟೆಗೆ ಮುಲ್ಲಾ ನಿಲ್ದಾಣಕ್ಕೆ ಬಂದಿದ್ದರೆ ಗುಲಬರ್ಗಾದಿಂದ ಕೆಂಭಾವಿಗೆ ಹೋಗುವ ಕೊನೆಯ ಬಸ್ಸು ಸಿಗುತ್ತಿತ್ತು. ಹತ್ತು ನಿಮಿಷದಲ್ಲಿ ಮನೆ ಸೇರಬಹುದಿತ್ತು. ಈಗೇನು ಮಾಡುವುದು? ಶಾಂತ ಯೋಚಿಸುತ್ತಾ ನಿಂತಳು. ಸ್ವಲ್ಪ ದೂರದಲ್ಲಿ ಒಬ್ಬ ಯುವಕ ಸಿಗರೇಟು ಸೇದುತ್ತಾ ನಿಂತಿರುವುದು ಕಾಣಿಸಿತು. ಈತನೆಲ್ಲಿಂದ ಬಂದ? ಇದೇ ಬಸ್ಸಿನಿಂದ ಇಳಿದಿರಬಹುದು. ತಾನು ಗಮನಿಸಿಯೇ ಇಲ್ಲ. ತನ್ನನ್ನಿಳಿಸಿದ ಬಸ್ಸು ಹೊರಟು ಹೋಗಿತ್ತು. ಆ ಯುವಕನ ಹೊರತು ಬೇರಾರೂ ಇಲ್ಲ. ಶಾಂತಾಗೆ ಹೆದರಿಕೆಯಾಯಿತು. ಮುಲ್ಲಾ ಹಳ್ಳಿ ದೂರವಿದೆ. ಅಲ್ಲಿ ಯಾರ ಪರಿಚಯವೂ ಇಲ್ಲ. ಕೈಗಳಲ್ಲಿ ನಾಲ್ಕು ಬಂಗಾರದ ಬಳೆಗಳಿವೆ ಕಿವಿಯಲ್ಲಿ ಓಲೆ, ಕೊರಳಲ್ಲಿ ಸರವಿದೆ. ಹೃದಯವೇ ಬಾಯಿಗೆ ಬಂದಂತಾಯಿತು.

ಆತನೇ ಮುಂದುವರಿದು ಮಾತನಾಡಿಸಿದ. "ಎಲ್ಲಿಗೆ ಹೋಗಬೇಕು?" "ಕೆಂಭಾವಿಗೆ" ಶಾಂತ ಅಳುಕಿನಿಂದಲೇ ಉತ್ತರಿಸಿದಳು. ಈಗಂತೂ ಬೆಳಗಿನವರೆಗೆ ಬಸ್ಸಿಲ್ಲ. ಇಲ್ಲಂತೂ ಇರುವಂತಿಲ್ಲ. ಬನ್ರಿ ನಡೆದೇ ಹೋಗೋಣ. ಏಕಾಂತದ ಯುವತಿ ಈ ಅಪರಿಚಿತನೊಂದಿಗೆ ಹೋಗುವುದೇ? ತನ್ನ ಮಾನ ಪ್ರಾಣ? ಶಾಂತ ಉತ್ತರಿಸಲಿಲ್ಲ. ಇಲ್ಲಂತೂ ಇರುವಂತಿಲ್ಲ. ನಡೆದರೆ ಎರಡು ಗಂಟೆಯ ದಾರಿ ದೇವರಿಚ್ಛೆಯಂತಾಗಲಿ, "ಆಗಲಿ ನಡೀರಿ" ಎಂದಳು ಶಾಂತ. ಆತನೇ ಮುಂದುವರಿದು "ಸೂಟಕೇಸ್ ಕೊಡಿ" ಎಂದು ಕೈಯಿಂದ ತೆಗೆದುಕೊಂಡ. ಇಷ್ಟು ಭಾರವನ್ನು ಈತನ ಮೇಲೆ ಹತ್ತು ಕಿ. ಮೀ. ಹೊರಿಸುವುದೆ? ಸೂಟಕೇಸ್ ಹೊತ್ತು ಆತ ಮುಂದೆ ಮುಂದೆ ನಡೆದ. ಶಾಂತ ಹಿಂಬಾಲಿಸಿದಳು. ಸ್ವಲ್ಪ ದೂರ ನಡೆದ ಮೇಲೆ ಹಿಂತಿರುಗಿ "ನೀವು ಮುಂದೆ ಬನ್ರಿ" ಎಂದು ತಾನು ಸ್ವಲ್ಪ ದೂರದಲ್ಲಿ ಹಿಂದೆ ಹಿಂದೆ ನಡೆದ. ಕಾರ್ಗತ್ತಲೆ. ರಸ್ತೆಯ ಎರಡು ಬದಿಯಲ್ಲಿ ದಟ್ಟವಾಗಿ ಬೆಳೆದ ಸರ್ಕಾರಿ ಜಾಲಿಯಿಂದ ಬರುವ ಕೀಟಗಳ ಜೀರ್‌ನಾದ ಶಾಂತಳಿಗೆ ಹೆದರಿಕೆ ಹುಟ್ಟಿಸುತ್ತಿತ್ತು. ಹದ್ನೂರ ಕ್ರಾಸಿನಿಂದ ದಕ್ಷಿಣಕ್ಕೆ ಕೆಂಭಾವಿ ದಾರಿ ಆತ ಸೂಟಕೇಸ್ ಕೆಳಗಿಟ್ಟು "ಆ ಬಂಗಾರದ ಬಳೆಗಳ ಬಿಚ್ಚಿ ಕೊಡಿ" ಎಂದ. ಶಾಂತಾಳ

ನರನಾಡಿಗಳಲ್ಲಿ ಶೀತಲ ಭಯ ಹರಿದಾಡಿತು. ಏನು ಶಾಂತ ಸ್ವರದಲ್ಲಿ ಕೇಳುದ್ದಾನೆ! ಶಾಂತ ವಿಧೇಯಳಂತೆ ಬಿಚ್ಚಿ ಕೊಟ್ಟಳು. ಒಡವೆಗಳನ್ನೆಲ್ಲಾ ಜೇಬಿಗೆ ಸೇರಿಸಿ ನಡೆಯಿರಿ ಎಂದ ಬಂಗಾರ ಹೋದರೆ ಹೋಯಿತು ಪ್ರಾಣ ಉಳಿದರೆ ಸಾಕು ಎಂದು ಕೊಂಡಳು ಶಾಂತ. ಕೆಂಭಾವಿ ರಸ್ತೆಯಿಂದ ಎಡಕ್ಕೆ ತಿರುಗುವ ನಗನೂರ ಕ್ರಾಸ್ ಎರಡು ಕಿ.ಮೀ. ಶಾಂತ ಎಡವಿದ್ದು ಚಪ್ಪಲಿ ಕಿತ್ತುಕೊಂಡು ಕಾಲೆಳೆಯುತ್ತಾ ನಡೆತ್ತಿರುವುದನ್ನು ಗಮನಿಸಿದ ಯುವಕ ನಿಂತು "ಕೊಡಿ" ಇಲ್ಲಿ ಎಂದ. ಇರಲಿ ಎಂದರೂ ಕೇಳದೆ ಕೈಯ್ಯಿಂದ ಎರಡು ಚಪ್ಪಲಿ ತೆಗೆದುಕೊಂಡ ಬರಿಯ ಕಾಲಿನಲ್ಲಿ ನಡೆಯುವುದು ಶಾಂತಾಗೆ ದುಸ್ತರವಾಯಿತು.

ಐದು ಕಿ. ಮೀ. ಬಸವಣ್ಣನಗುಡಿ ಅರ್ಧ ತೋಡಿದ ಕಾಲುವೆ ಕೂಲಿಕಾರರ ವಿಶ್ರಾಂತಿಗೆಂದು ಕಟ್ಟಿದ ಮನೆ ಬೋಳಾದ ರಸ್ತೆ ಒದಿಯ ಜಾಲಿ ಮರಗಳು ಅಲ್ಲಲ್ಲಿ ಕಪ್ಪು ವ್ಯಕ್ತಿಗಳು ನಿಂತಂತೆ ಕಾಣುತ್ತಿತ್ತು. ಶಾಂತ ಎಡವಿ "ಅಮ್ಮಾ" ಎಂದು ಸಣ್ಣದಾಗಿ ಚೀರಿ ನೋವಿನಿಂದ ಮುಖಕಿವಿಚಿ ಕಾಲು ಹಿಡಿದು ನಡು ರಸ್ತೆಯಲ್ಲಿ ಕುಳಿತು ಬಿಟ್ಟಳು. ಸೂಟಕೇಸ್ ಕೆಳಗಿಟ್ಟು ಬೆಂಕಿ ಪೆಟ್ಟಿಗೆ ಶಾಂತಾಳ ಕೈಗಿತ್ತ "ಕಡ್ಡಿ ಕೊರೆಯಿರಿ" ಎಂದ ಯುವಕ ತಾನೂ ನೆಲದ ಮೇಲೆ ಕುಳಿತು ಗಾಯವಾಗಿ ರಕ್ತ ಒಸರುತ್ತಿದ್ದ ಕಾಲನ್ನು ಕೈಯಿಂದ ಹಿಡಿದು ಜೇಬಿನಿಂದ ಕರವಸ್ತ್ರ ತೆಗೆದು ಗಾಯಕ್ಕೆ ಕಟ್ಟಿದನು. ಪರ ಪುರುಷನ ಸ್ಪರ್ಶದಿಂದ ಶಾಂತಾಳ ದೇಹದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಆತ ನಿಸ್ಸಂಕೋಚವಾಗಿ ಕಾಲು ಸ್ಪರ್ಶಿಸಿದಾಗ ಮುಂದೇನಾಗುವುದೋ ಎಂದು ಆತಂಕಗೊಂಡಿತು ಶಾಂತಾಗೆ ಕೊರೆದ ಬೆಂಕಿ ಕಡ್ಡಿಯ ಬೆಳಕಿನಲ್ಲಿ ಶಾಂತಾ ತಲೆ ಎತ್ತಿ ಆತನ ಮುಖ ನೋಡಿದಳು. ಯೌವ್ವನ ಉಕ್ಕುವ ಅಮೃತ ಶಿಲೆಯಲ್ಲಿ ಕಡೆದ ಗ್ರೀಕ್ ವಿಗ್ರಹ ವಿಧಾಯಿತನಾದ ತನ್ನ ಮನದಲ್ಲಿ ಇಂತಹ ವಿಕೃತ ಯೋಚನೆ ಬಂದಿದ್ದಕ್ಕೆ ಶಾಂತಾಗೆ ನಾಚಿಕೆಯಾಯಿತು. Every thing beautiful impresses us as Sufficiant to itself ಎಂಬ ಮಾತು ನೆನಪಾಯಿತು. ತಾನು ಕುಂಟುತ್ತಾ ಮುಂದೆ ಮುಂದೆ ಆತ ಸೂಟಕೇಸ್ ಹೊತ್ತು ಹಿಂದೆ ಹಿಂದೆ ನಡೆದ, ಈ ವರೆಗೆ ಅಂತಹದ್ದೇನೂ ಅನುಚಿತವಾದದ್ದು ನಡೆಯಲಿಲ್ಲ. ಎಂದು ಕೊಂಡಳು ಆಕೆ ಮನದಲ್ಲೇ ಕೆಂಭಾವಿ ರಸ್ತೆಗೆ ಅಡ್ಡಲಾಗಿ ಹರಿಯುವ ಕಾಲುವೆ ದಾಟಿದರೆ ಮುಂದ ಮೂರೇ ಕಿ. ಮೀ. ಒಂದೂ ಬಸ್ಸು ವಾಹನಾದಿಗಳು ನಡೆವರು. ದೂರದಲ್ಲಿ ಗುಡ್ಡದ ಓರೆಯಲ್ಲಿ ನರಿ ಊಳಿಡುವ ಶಬ್ದ ಕೇಳಿಸುತ್ತಿತ್ತು. ತಾನು ಬರಲೇ ಬಾರದಾಗಿತ್ತು ಬೆಳಗ್ಗೆ ಬಂದಿದ್ದರೆ ನಡೆಯುತ್ತಿತ್ತು ಎಂದು ಶಾಂತ ಯೋಚಿಸುತ್ತಿದ್ದಳು ಅಮ್ಮ ಹೋಗುವುದು ಬೇಡವೆಂದು ಎಷ್ಟು ಹೇಳಿದರೂ ತಾನೇ ಕೇಳಲಿಲ್ಲ. ದೂರದಲ್ಲಿ ಪೂರ್ವಕ್ಕೆ ಹಿತ್ತಲಾಪ ಕಾಲೋನಿಯ ದೀಪಗಳು ಕಾಣಿಸುತ್ತಿವೆ. ಇನ್ನೇನು ಕಾಲುವೆ ದಾಟಿದ ಕೆಂಭಾವಿ ಬಂದಂತೆಯೇ ರಸ್ತೆಯು ಎಡಕ್ಕೆ ತಿರುಗಿ ಗುಡ್ಡ ಹತ್ತಿದರೆ ...

ಕಾಲೋನಿ ಅತ ಬಲಕ್ಕೆ ತಿರುಗಿ ಬಿಟ್ಟು ಕಾಲೋನಿಯಲ್ಲಿ ಹೋಗಿಬಿಟ್ಟರೆ? ಸೂಟಕೇಸು ಬಂಗಾರ ಎಲ್ಲಾ ಹೋದಂತೆಯೇ ಆತನ ಹೆಸರೂ ಕೂಡ ಗೊತ್ತಿಲ್ಲ. ಎಲ್ಲಿ ನಿಮ್ಮ ಮನೆ ಯುವಕ ಕೇಳಿದ "ಗುಡ್ಡದ ಮೇಲೆ" ಎಂದಳು ಶಾಂತಾ ಗುಡ್ಡ ಹತ್ತಿ ಏದುಸಿರು ಬಿಡುತ್ತಾ ಕಾಲಿಂಗ್ ಬೆಲ್ ಒತ್ತಿದರೆ ಆಕೆಯ ಗಂಡ ಕದ ತೆರೆದ. ಆತ ಆಶ್ಚರ್ಯದಿಂದ "ಶಾಂತಾ ನೀನು ಇಷ್ಟು ಹೊತ್ತಿನಲ್ಲಿ? ನಡೆದೇ ಬಂದೆಯಾ?" ಶಾಂತಾ ಉತ್ತರಿಸಲಿಲ್ಲ. ನಿಮ್ಮ ಚಪ್ಪಲಿ, ಸೂಟಕೇಸ್, ಬಂಗಾರ ಶಾಂತಾಳ ಕೈಗಿತ್ತ "ಬರ್ತೀನಿ" ಎಂದು ಹೊರಟ ಯುವಕ "ರೀ ಇವರೇ ನಿಮ್ಮ ಹೆಸರು?" "ರಫೀಕ್ ಅಹಮ್ಮದ್" ಎಂದು ಉತ್ತರಿಸಿ ತಿರುಗಿ ನೋಡದೆ ಸರಸರ ಹೊರಟೇ ಹೋದ. ಶಾಂತಾ ಕೃತಜ್ಞತೆ ಹೇಳಲು ಬಾಯಿ ತೆರೆದಳು. ಶಬ್ದಗಳು ಗಂಟಲಲ್ಲೇ ಉಳಿದವು ಅವನ ಜೊತೆ ಯಾಕೆ ಬಂದೆ? ಆ ಜನ ಯಾವುದಕ್ಕೂ ಹೇಸೋದಿಲ್ಲ ದೀಪದ ಬೆಳಕಿನಲ್ಲಿ ನಿಂತಿದ್ದ ಗಂಡನ ಮುಖವನ್ನೊಮ್ಮೆ ಕರುಣೆಯಿಂದ ನೋಡಿದಳು ಶಾಂತ.

---

## ಹೆಸರು ಬೇಕಿತ್ತು

● ಅಶೋಕ ಥೋರಾತ್

ರಾಜ-ಮಹಾರಾಜರ
ಅರಮನೆಗಳೆಲ್ಲ
ಹರ್ಷ ಅಶೋಕ ಬಹಮನಿ
ಮಹಾರಾಜ ರಾಜಧಾನಿ
ಇನ್ಯಾವುದೋ ಪಂಚತಾರಾ ಹೊಟೇಲುಗಳಾದವು

ರಾಜ ನರ್ತಕೀಯರ
ಶಾಸ್ತ್ರ ಬದ್ಧ ನೃತ್ಯಗಳೆಲ್ಲ
ಡಿಸ್ಕೋ ಯುರೋಪ ಕ್ಯಾಬರೆ
ಫ್ರೀಸ್ಟ ಡಾನ್ಸಗಳಾದವು

ತಬಲ ಮೃದಂಗ ವೀಣಾವಾದಗಳೆಲ್ಲ
ಡ್ರಮ್ಮು ಬ್ಯಾಂಡು ಡೋಲಕಗಳಲ್ಲಿ ಲೀನವಾದವು
ಮಧುರ ಭಾವ ಚಿಮ್ಮಿಸುವ ಅಮೃತ ಪಾನೀಗಳೆಲ್ಲ
ವಿಸ್ಕಿ ರಮ್ಮು ಸೋಡಾಗಳಾದವು

ಉದ್ಯೋಗಪತಿಗಳೆಲ್ಲ [illegible]
ರಾಜಸೇವಕರೆಲ್ಲ ವೇಟರರಾದರು
ರಾಜರೆಲ್ಲ ಸಚಿಸಿದರು
ರಾಕ್ಷಸರೆಲ್ಲ ಜನಿಸಿದರು

ಅರಮನೆ ಹೆಸರಿನಲ್ಲಿ
ಸೆರಮನೆ ತೆರೆಯಲು
ಕದ್ದು ಕುಡಿಯಲು
ಕುಣಿದು ಸಂತೋಷ ಪಡಲು
ಪಾಶ್ಚಿಮಾತ್ಯರ ಸುಸಂಸ್ಕೃತಿ
ಮುಂದೊರಿಸಲು

ಬಾರತೀಯ ಸಂಸ್ಕಾರದ
ಹೆಸರು ಬೇಕಿತ್ತು ನಮಗೆ
ಬೀಯರ ಬಾರಿಗೆ
ಪರಮಿಟ ರೂಮಿಗೆ
ಒಂದು ಹಳೆಯ ಹೆಸರು
ಬೇಕಾಗಿತ್ತು ನಮಗೆ

---

## ಹನಿಗವನಗಳು

● ಶೀಲಾದೇವಿ ಸಿ. ಆರ್.

### ವಿಪರ್ಯಾಸ

ಬದುಕಿಗೆ
ಬೇವು ಬೆಲ್ಲ
ತರಾಸೆ
ಎಂದಿದ್ರೆ
ನೀ ಬರೆ ಬೇವು
ಆಗಿ ಬಿಟ್ಟೆ

### [illegible]

[illegible]
[illegible]
[illegible]
[illegible]
[illegible]
ಅಪ್ಪಿ ಕೊಂಡೆ
ಎಂದೇ

 ಕಮಲಮೂರ್ತಿ

# ಹನಿಗವನಗಳು

**ಶಾಶ್ವತ**

ಅಪರೂಪಕ್ಕೆ ಸಿಕ್ಕ
ಕವಿ ಮಿತ್ರನನ್ನು ಕೇಳಿದೆ
ಇತ್ತೀಚೆಗೆ ಏನು ಬರೆದಿರಿ ಎಂದು
ಬರೆದೆ ಒಂದಿಷ್ಟು ಪ್ರೇಮ ಕವನಗಳ
ಹೆಣ್ಣಿನ ಎದೆಯ ಮೇಲೆ ಎಂದರು
ಅರ್ಥವಾಗದೆ ಪ್ರಶ್ನಿಸಿದೆ
ಕಾಗದದ ಅಭಾವವೆ?
ಅಥವಾ ಕಾಗದ ತುಟ್ಟಿಯೆಂದೆ?
ಮುಗುಳ್ನಕ್ಕು ಮರು ನುಡಿದರು
ಹಾಗೇನಲ್ಲ, ಅಲ್ಲಿ ಬರೆದರೆ
ಅಳಿಸಿ ಹೋಗುವುದಿಲ್ಲ
ಕಳೆದು ಹೋಗುವುದಿಲ್ಲ

**ಬಂಜೆ**

ಬಂಜೆ ಬಂಜೆಯೆಂದು
ನನ್ನ ಜರಿಯುವ
ಜನಕ್ಕೇನು ಗೊತ್ತು?
ನನ್ನೊಡಲಲ್ಲಿ [illegible]
[illegible]
ನಾನನುಭವಿಸುವ
ಪ್ರಸವ ವೇದನೆ!

**ವಿಪರ್ಯಾಸ**

ಗಂಡು ಮಗನಿದ್ದೂ ಮಗಳ ಮನೆಯಲ್ಲಿ
ಬದುಕುತ್ತಿದ್ದ ಅಜ್ಜ ಅಜ್ಜಿಯ ಕತೆ
ಹರುಷದಿಂದ ಹರಸಿದರು ಮೊಮ್ಮಗಳಿಗೆ
[illegible]

ಡಾ|| ಬೆಸಗರಹಳ್ಳಿ ರಾಮಣ್ಣ

# ಬಂಡಾಯ ಸಾಹಿತ್ಯ ಗಂಭೀರ-ಜನಪರ ಕ್ರಿಯೆ*

"ಖಡ್ಗವಾಗಲಿ ಕಾವ್ಯ" ಎಂಬ ಘೋಷಣೆಯೊಂದಿಗೆ ಬಂಡಾಯ ಆರಂಭವಾಯಿತು. ಇಂದು "ಬಂಡಾಯ ಒಂದು ಮನೋಧರ್ಮ" ಎಂದು ಹೇಳುತ್ತಿದ್ದೇವೆ.

ಬ್ರಿಟಿಷರು ನಮ್ಮನ್ನು ಆಳುತ್ತಿದ್ದರು. ಅವರಿಗಿಂತ ತಣ್ಣನೆಯ ಕ್ರೌರ್ಯ ನಡೆಸುತ್ತ ನಮ್ಮ ದೇಶದ ಬೆರಳೆಣಿಕೆಯ ಜನ ನಮ್ಮನ್ನು ಆಳುತ್ತಿದ್ದಾರೆ. ಜತಗಾರರ ಶೋಷಿತರ ಅಂತರಾಳವನ್ನು ಮಿಡಿಯುವ ಸಾಹಿತ್ಯವನ್ನು ನಾವು ರಚಿಸಬೇಕಾಗಿದೆ.

ಮಾನವನ ಬದುಕು ಸೊಗಸಾಗುವುದರ ಬಗ್ಗೆ ಮುಂದಿನ ತಲೆಮಾರಿಗೆ ಮಾದರಿ ಆಗುವ ರೀತಿಯಲ್ಲಿ ನಾವು ಬರೆಯಬೇಕು. ಮಾನವನ ವ್ಯಕ್ತಿತ್ವದ ವಿಕಾಸಕ್ಕೆ ಅಡ್ಡಿಯಾಗುವುದರ ವಿವರಗಳನ್ನು ನಮ್ಮ ಸಾಹಿತ್ಯದಲ್ಲಿ ನೀಡಬೇಕು.

* * * *

ಮಾತು ಮತ್ತು ಕೃತಿಗೆ ಸಂಬಂಧ ಇಲ್ಲದಿರುವ ಕಡೆ ಒಳ್ಳೆಯ ಸಾಹಿತ್ಯ ಸೃಷ್ಟಿಯಾಗುವುದಿಲ್ಲ. ತೆಲುಗಿನ ದಿಗಂಬರ ಪಂಥದ ಸಾಹಿತಿಗಳಲ್ಲಿ ಒಬ್ಬ ಸಾಹಿತಿ ವರದಕ್ಷಿಣೆ ತೆಗೆದುಕೊಂಡ ಎಂಬ ಕಾರಣಕ್ಕೆ ಆ ಚಳುವಳಿ ಬಿರುಕು ಕಂಡಿತು. ದಿಗಂಬರ ಪಂಥ ೬ ವರ್ಷ ಮಾತ್ರ ಬದುಕಿತ್ತು.

ಬಂಡಾಯ ಸಾಹಿತಿ ತನ್ನ ಕೃತಿಗೆ ಯಾರ ರಿಯಾಯಿತಿಯನ್ನೂ ಕೇಳಬೇಕಾಗಿಲ್ಲ. ಹೆಚ್ಚು ಕೃತಿಗಳನ್ನು ರಚಿಸಬೇಕೆಂಬ ಹಠವೂ ಬೇಡ. ಕೆಲವೇ ಕೃತಿ ರಚಿಸಿದರೂ ಗಟ್ಟಿ ಕೃತಿ ರಚಿಸಬೇಕು. Lead kindly to Light ಪದ್ಯ ಬರೆದ ಕವಿ ಕೆಲವೇ ಪದ್ಯ ಬರೆದು ಜಗತ್ಪ್ರಸಿದ್ಧಿಯಾದ.

ನಾವು ಹೆಚ್ಚು ಓದಬೇಕು. ಅಕ್ಷರ ದ್ವೇಷಿಗಳಾಗಬಾರದು. Consume–

---

* ಉದ್ಘಾಟನಾ ಭಾಷಣದ ಸಾರಾಂಶ
(೯ನೇ ಸಮ್ಮೇಳನ)
ಸೌಜನ್ಯ :- ಸಾಹಿತ್ಯ ಮತ್ತು ಸಮೂಹ 'ಪ್ರಜ್ಞೆ' ಸಂ : ಗುಂಡಿಹಳ್ಳಿ ನಾಗರಾಜ

rismಗೆ ಬಲಿಯಾಗಬಾರದು. consumerism ಕೊಳ್ಳುವವರನ್ನು ಉಂಡಾಡು ದವರನ್ನೂ ಹಾಳು ಮಾಡುತ್ತದೆ.

* * * *

ನಮ್ಮ ತತ್ವಕ್ಕೆ ನಾವು ಬದ್ಧರಾಗಬೇಕು. ನಮ್ಮ ಕೃತಿಗಳ ಮೌಲ್ಯ ಮಾಪನಕ್ಕೆ ನಮ್ಮಲ್ಲೇ ವಿಮರ್ಶಕರು ಸಿದ್ಧರಾಗಬೇಕು. ಅವರಿವರ ವಿಮರ್ಶೆಗೆ ನಾವು ಯಾಕೆ ಕಾಯಬೇಕು? ಹಾಗೆಂದು ನಮ್ಮ ಸಾಹಿತ್ಯಕ್ಕೆ ಯಾವುದೇ ರಿಯಾಯಿತಿ ಬೇಡ.

ಕಾವ್ಯ ಎಂದರೆ ಗಂಭೀರವಾದ–ಜನಪರ ಕ್ರಿಯೆ. ವರ್ಷಕ್ಕೆ ಮೂರು ಅಥವಾ ನಾಲ್ಕು ಕೃತಿಗಳನ್ನು ಭರದಿಂದ ಹೊರತರುವ ಆತುರ ಬೇಡ. ○

---

**● ಅರುಣ ಮ. ಜೇವರ್ಗಿ**

## ನಕ್ಷತ್ರಗಳು

ನಾವೇನು ರವಿಚಂದ್ರರಲ್ಲ
ನೀಲಿ ಬಾನಿನ ಚುಕ್ಕೆಗಳು
ಸಮಯ ಬಂದಾಗ ಚಲಿಸುವವರಲ್ಲ
ಸಮಯವಾದಾಗ ಒಂದೆಡೆ ನಿಲ್ಲುವವರು
ನಾವೇನು ಮುಳುಗಿ ಏಳುವವರಲ್ಲ
ನಿಂತಲ್ಲೆ-ನಿಂತು ಬೆಳಕಿಗೆ ಬಾರದಿರುವ
ನತದೃಷ್ಟರು ದೌರ್ಭಾಗ್ಯರು
ಚಂದ್ರನಿಲ್ಲದಾಗ ಮುಂದೆ ಬೆಳಕನ್ನು ನೀಡುವವರು
ಸೂರ್ಯ ಬಂದಾಗ ಅವನ ಮುಂದೆ
ನಿಲ್ಲಲಾರದ ಶಕ್ತಿ ಹೀನರು
ಮೋಡ ಬಂದಾಗ ಮುಚ್ಚಿ ಬಯಲಾದಾಗ
ಹೊಳೆಯುವ ನೀಲಿ ಬಾನಿನ ಚುಕ್ಕೆಗಳು

ಬರಗೂರ ರಾಮಚಂದ್ರಪ್ಪ

# ಬರೀ ಹೊಗಳಿಕೆ ಬೇಡ*

---

ಬಂಡಾಯವು ಇಂದು ಸಮರ್ಥನೆಯಿಂದ ಸ್ವವಿಮರ್ಶೆ ಕಡೆಗೆ ವಾಲುತ್ತಿದೆ. ಯಾವುದೇ ಸಂಘಟನೆಯ ಆರಂಭದಲ್ಲಿ ಸಮರ್ಥನೆ ಇದ್ದೇ ಇರುತ್ತದೆ. ಆಯಾ ಸಂಘಟನೆಗಳಿಗೆ ಅದು ಅನಿವಾರ್ಯ ಕೂಡ. ಆದರೆ ಯಾವ ಚಳುವಳಿಯಲ್ಲಿ ಸ್ವವಿಮರ್ಶೆ ಇರುವುದಿಲ್ಲವೋ ಅದು ಬಹಳ ಕಾಲ ಉಳಿಯುವುದಿಲ್ಲ.

ಬಂಡಾಯದಲ್ಲಿ ಪ್ರಶ್ನೆ ಒಂದು ಪ್ರತೀಕ. ನೋವು, ಸಂಕಟಗಳು ಕೆಲವು ಪ್ರಶ್ನೆಗಳನ್ನೂ ಇಡುತ್ತವೆ. ಸಮಾಜದ ಪ್ರಶ್ನೆಗಳು ನಮ್ಮ ಪ್ರಶ್ನೆಗಳೂ ಸಹ, ನಮಗೆ ನಾವೇ ಹಾಕಿಕೊಳ್ಳುವ ಪ್ರಶ್ನೆಗಳು.

ಬಂಡಾಯ ಚಲನಶೀಲತೆಯ ಪರವಾಗಿ ಇದೆ. ಆದರೆ ಬರೀ ನಿರಾಕರಣೆ ಯಾದರೆ ಕುರುಡುತನವಾಗುತ್ತದೆ. ನಿರಾಕರಣೆಗೆ ಉಡಾಫೆಯ ಸ್ವರೂಪವೂ ಇದೆ. ಆದರೆ ನಿರಾಕರಣೆಯನ್ನು ಮೀರುವ ಕ್ರಿಯೆ ಬಂಡಾಯ. ಚರಿತ್ರೆ ಮತ್ತು ಸಮಕಾಲೀನ ಸಂದರ್ಭಗಳನ್ನು ಅರ್ಥಮಾಡಿಕೊಂಡಾಗ ಮೀರುವ ಕ್ರಿಯೆಯ ಮಹತ್ವ ಅರ್ಥವಾಗುತ್ತದೆ. ಇದು ಬದುಕುವ ಬದ್ಧತೆಯಿಂದ ಹುಟ್ಟಿದ್ದು.

* * * *

ಬರಹಗಾರನನ್ನು ಕೈ ಬಿಟ್ಟು ಬರಹ ನೋಡುವ ಕಾಲ ಇದಲ್ಲ. ಬರಹ-ಬದುಕು ಮಧ್ಯದ ಕಂದಕಗಳನ್ನು ಮುಚ್ಚುವ ಪ್ರಕ್ರಿಯೆಯಿಂದ ನಿಜವಾದ ಕಲೆ ಸಾಧ್ಯ. ಸಾಹಿತ್ಯವನ್ನು ಪುನರಾವಲೋಕನ ಮಾಡಿದರೆ ಸಾಲದು. ಬದುಕನ್ನು ಪುನರಾವಲೋಕನ ಮಾಡಬೇಕು. ಇದು ಹೊಸಬದುಕನ್ನು ಕಟ್ಟುವ ಕ್ರಿಯೆ. ಕಟ್ಟುವ ಕ್ರಿಯೆಯು ಕರುಳಿನ ಒಳಗಡೆ ಇರುವ ಕಂತ ಹೆಚ್ಚು ಮಾನವೀಯ ವಾದದ್ದು.

ಬಂಡಾಯದಲ್ಲಿ ಬಿಳಿಯ ಕೃತಿಗಳು ಬಂದಿಲ್ಲ ಎನ್ನುವವರು ಮತ್ತು ವರ್ಣದ ಅನಕ್ಷರಸ್ಥರು. ಹೊಸಲಾತಿ ನೀಡಿದ ರೀತಿಯಲ್ಲಿ ದೇವನೂರು ಮಹಾದೇವ ಮತ್ತು ಸಿದ್ದಲಿಂಗಯ್ಯ ಅವರ ಹೆಸರನ್ನು ಮಾತ್ರ ಹೇಳುವುದು ಆರಂಭವಾಗಿದೆ. ಆದರೆ

---

* ಉದ್ಘಾಟನಾ ಸಮಾರಂಭದ ಅಧ್ಯಕ್ಷ ಭಾಷಣದ ಸಾರಾಂಶ
(೯ನೇ ಸಮ್ಮೇಳನ)
ಸೌಜನ್ಯ :- ಸಾಹಿತ್ಯ ಮತ್ತು ಸಮಾಜ ಪುಸ್ತಕ ಸಂ : ಗುಡಿಹಳ್ಳಿ ನಾಗರಾಜ

ಅವರ ಜತೆಗೆ ಅನೇಕ ಬಂಡಾಯ ಲೇಖಕರ ಸಮರ್ಥ ಕೃತಿಗಳ ಬಗ್ಗೆ ಯಾಕೆ ಮೌನ ವಹಿಸಲಾಗಿದೆ?

ಪ್ರತಿಭೆ, ಯೋಗ್ಯತೆಯ ಪ್ರಶ್ನೆ ಬರೀ ಸಾಮಾಜಿಕವಾದದ್ದಲ್ಲ. ಸಾಂಸ್ಕೃತಿಕವಾದದ್ದೂ ಸಹ ಹೌದು. ಪ್ರತಿಭೆ, ಯೋಗ್ಯತೆ ಯಾರ ಸ್ವತ್ತೂ ಅಲ್ಲ.

*　*　*　*

ಬರೀ ಹೊಗಳಿಕೆ ಬಯಸಿದರೆ ಹಾಳಾಗುತ್ತೇವೆ.

---

● ವಿಠ್ಠಪ್ಪ ಗೋರಂಟ್ಲಿ

## ನನ್ನ ಕವನ

ಹೀಗೆಯೇ ಬರೆದೆ ಗೆಳೆಯ
ನೂರಾರು ಕವನಗಳ
ಬಿಳಿ ಹಾಳೆಯಲ್ಲಿ ಅಕ್ಷರ ಮೂಡಿ
ಮಾಸಿ ಹೋದವು ಮಾತ್ರ
ಬದಲಾಗಲಿಲ್ಲ ಸಮಾಜದ ಚಿತ್ರ

ಈಗ ಮಸಿಗೆ ಬದಲು
ರಕ್ತದಿಂದ ಬರೆಯಬೇಕಿದೆ
ಹಾಳೆಗೆ ಬದಲು
ಬಳಸಬೇಕಿದೆ
ದುಡಿದು ಬೇಸತ್ತ ನನ್ನ ಜನರೆದೆಗಳ

ಸತ್ತ ನರನಾಡಿಗೆ
ತುಂಬಬೇಕು ಚೇತನ ರಸ
ಅಕ್ಷರದಿಂದಲ್ಲ
ಪ್ರತ್ಯಕ್ಷ ಬದುಕಿನಿಂದ

ಸಿದ್ಧರಾಮು ಹೊನ್ಕಲ್

# ನನ್ನ ಕವಿತೆ

ಬದುಕೊಂದು ಜಟಕಾ ಬಂಡಿ
ಎಂದು ಒಪ್ಪಿದರೂ
ವಿಧಿಯದರ ಸಾಹೇಬ ಎಂದು
ನನ್ನ ಕವಿತೆ ಒಪ್ಪುವದಿಲ್ಲ
ಕೈ ಚೆಲ್ಲಿ ಕುಳಿತುಕೊಳ್ಳುವದಿಲ್ಲ

ನಿತ್ಯ ಮೂಡುವ ಸೂರ್ಯಚಂದ್ರ ಚುಕ್ಕಿಗಳು
ಸುಳಿ ಸುಳಿವ ಗಾಳಿ ಮಳೆ-ಮಿಂಚು ಗುಡುಗುಗಳ
ಮಧ್ಯೆಯು ನಾನೇನು ಯಕಶ್ಚಿತಳು ಎಂದು
ಕೀಳರಿಮೆಯಿಂದ ಬಳಲುವದಿಲ್ಲ

ಬುದ್ಧ–ಬಸವ–ಗಾಂಧಿಗಳಂಥವರೇ
ಇಂದು ಗೋಡೆಯ ಗಾಳಿ ಪಟವಾಗಿ
ತೂಗಾಡುವಾಗಲೂ
ಇಲ್ಲಿ ತಾನೇನು ಹೊಸತನ್ನು
ಸೃಜಿಸಿಯೇನು ಎಂದು
ಹತಾಶಳಾಗಿ ನಿಲ್ಲುವದಿಲ್ಲ

ಮುಗಿಲಿಗೆ ಮುತ್ತಿಡುವ ಗಿರಿಕಾನನಗಳು
ಭೋರ್ಗರೆದು ಹರಿವ ನದಿ ಜಲಪಾತಗಳ
ಈ ಅನಂತತೆಯ ಮಧ್ಯೆಯು
ನನ್ನಂತಹ ಸಾಮಾನ್ಯಳದೇನು ಕೆಲಸ ಎಂದು
ವಿಮುಖಳಾಗುವದಿಲ್ಲ

ಈ ಭೂ ಒಡಲ ಬದುಕಿನಿಂದ
ಹುಟ್ಟಿದ
ಜೀವರಸ ಅವಳು

ಕವಿಗೆ ಕಾವ್ಯವಾಗಿ
ಕಲಾವಿದನ ಕುಂಚಕ್ಕೆ ಚಿತ್ರವಾಗಿ
ಸಂಗೀತಗಾರನಿಗೆ ಹಾಡಾಗಿ
ನರ್ತಕನಲ್ಲಿ ನಾಟ್ಯವಾಗಿ ನಟಿಸಿದವಳು

ಹಾಯಾಗಿದ್ದಲ್ಲಿ ಹಿಗ್ಗಿ
ನೋವಾಗಿದ್ದಲ್ಲಿ ಕುಗ್ಗಿ
ಅವರವರ ಹಾಡು ಪಾಡನು ಕೇಳಿ
ಸಂತೈಸಿ ಶಮನಗೊಳಿಸಿದವಳು

ಆರಂಭದಲ್ಲಿಯು ಆದರ್ಶ
ತಾರುಣ್ಯದಲ್ಲಿಯು ರೋಮಾನ್ಸ್‌ದ
ರಮ್ಯದಲ್ಲಿ ಮುಳುಗೆದ್ದರೂ
ವಾಸ್ತವದ ಬೆಂಕಿಯನು ಕಂಡು
ಸಿಡಿದೆದ್ದು ಸ್ಫೋಟಿಸಿದವಳು

ಮೇಲು ಕೀಳುಗಳಿಲ್ಲ
ಮುಟ್ಟು ತಟ್ಟುಗಳಿಲ್ಲ
ಲಿಂಗಭಾವಗಳಿಲ್ಲ
ತಾನೊಲಿದಂತೆ
ಹಾಡ ಬಯಸಿದವರಿಗೆಲ್ಲಾ
ನೆರಳು ನೀಡಿದವಳು

ನೋವಿಂದಲೇ ಇರಲಿ
ಕಾವಿಂದಲೇ ಇರಲಿ
ನನ್ನ ಕವಿತೆ ದೃತಿಗೊಳ್ಳುವದಿಲ್ಲ
ಸಂತೃಪ್ತಿಯಲ್ಲಿ ತೆಪ್ಪ ಕಟ್ಟಿ
ಬದುಕಿನ ದಡ ಸೇರುವತನಕ
ವಿಶ್ರಾಂತಿ ಪಡೆಯುವದಿಲ್ಲ

(೨೮-೯-೯೩ ರಿಂದ ೧-೧೦-೯೩ರವರೆಗೆ ಶಿವಮೊಗ್ಗ ಜಿಲ್ಲೆಯ ತುಮರಿ ದ್ವೀಪದಲ್ಲಿ ನಡೆದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯಕ್ರಮದಲ್ಲಿ ಭಾಗವಹಿಸಿ ರಚಿಸಲಾದ ಕವನ. ೧-೧೦-೯೩ರ ರಾತ್ರಿ ದಾವಣಗೆರೆಯಲ್ಲಿ ಶಂಕರ ಪಾಟೀಲರ ಬೆಳ್ಳಿ ಬೆಳದಿಂಗಳು ಕಾರ್ಯಕ್ರಮದಲ್ಲಿ ನಿವೇದಿಸಲಾಯಿತು.)

● ಶಾಂತಪ್ಪ ಬೂದಿಹಾಳ

## ನಾನಾರು ತ್ತಿಳಿ

ಬಾನಂಗಳದ ಬಯಲಲ್ಲಿ
ಬಾನಾಡಿ, ಗಾಳಿ ಪಟಕ್ಕೊಂದು ತುರುಸು
ನಾ ಮೇಲು, ತಾ ಮೇಲೆಂದು
ಎರಡಕ್ಕೂ ಇರುಸು ಮುರುಸು
ತಮಗಿಂತಲೂ ಮೇಲು ಗ್ರಹ, ನೀಹಾರಿಕೆ,
ಚಂದಿರ, ಸೂರ್ಯರಿರುವ ಅರಿವೇ ಇಲ್ಲ
ಎರಡೂ ಪಟಾಲಂಗೈದು ಸಡ್ಡು ಹೊಡೆದು
ಆಖಾಡಕ್ಕಿಳಿದವು.
ತಂತಮ್ಮ ಸಾಮರ್ಥ್ಯವನ್ನರಿಯದವು
ಮಧ್ಯಸ್ಥಗಾರರು ತಿಳಿಸಿ ಹೇಳಿದರು
ಏರಿದವನು ಇಳಿಯಲೇಬೇಕು
ಏರಿದವನು ಚಿಕ್ಕವನಿರಲೇಬೇಕು
ತಿಳಿದು ಹೇಳಿದವರ ನುಡಿ
ತಿಳಿದು ನಡೆದರೆ ಅದು ನಮಗೆ ಸುಖವು
ಮೊದಲು ನಾನಾರೆಂದು ಅರಿ
ಸಾಧಿಸುವಿ ಆ ಮೇಲೆ ನಿನ್ನ ನಿಜದ ಗುರಿ.

---

## ಈ ಸಂಚಿಕೆಯ ಲೇಖಕರ ವಿಳಾಸಗಳು

* ಸಿದ್ಧರಾಮ ಹೊನ್ಕಲ್ 'ಹೊಸ ದಿಕ್ಕು' ದಿಗ್ಗಿ ಬಿಲ್ಡಿಂಗ್ ಶಹಾಪೂರ ೫೮೫ ೨೨೩
* ಡಾ॥ ಸಂಜೀವಶೆಟ್ಟಿ ಕನ್ನಡ ವಿ. ವಿ. ಹಂಪಿ
* ಬಾಪುಗೌಡ ಶಾಡಲಗೇರಿ
* ಡಾ॥ ವಿ. ಜಿ. ಪೂಜಾರ, ಗುಲಬರ್ಗಾ ವಿ. ವಿ. ಗುಲಬರ್ಗಾ
* ರಾಜಶೇಖರ ಪಾಟೀಲ ಹಳಗುಂದಾ ಅಂಚೆ. ಭಂಕೂರ ತಾ॥ ಚಿತ್ತಾಪೂರ ಜಿ॥ ಗುಲಬರ್ಗಾ
* ಗೌರಿಸುತ ಗಣೇಶ (ಗಣೇಶ ಅಮೀನಗಡ) ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿ. ವಿ. ಹಂಪಿ
* ಶಿವರಾಮಯ್ಯ 'ಅಮ್ಮಾಜಿ' ನಂ.೧೨೧, ೧೩ನೇ ಮುಖ್ಯರಸ್ತೆ, ಬನ್ನಿ ಲೇಔಟ, ವಿಜಯನಗರ ಬೆಂಗಳೂರು
* ದೇವು ಪತ್ತಾರ ಹಳೇಪೇಟ, ಶಹಾಪೂರ (ಗುಲಬರ್ಗಾ)
* ಸುರೇಂದ್ರ ಕೆರಮಗಿ ಅಂಚೆ, ಕಮಲಾಪೂರ (ಗುಲಬರ್ಗಾ)
* ಶ್ರೀನಿವಾಸ ಜಾಲವಾದಿ ಗಾಂಧಿ ಚೌಕ ಹತ್ತಿರ ಅಂಚೆ ಸುರಪೂರ (ಗುಲಬರ್ಗಾ)
* ಶಂಕರಯ್ಯ ಘಂಟಿ ಎಫ್.ಡಿ.ಪಿ. ಗುಲಬರ್ಗಾ ವಿ. ವಿ. ಗುಲ್ಬರ್ಗಾ
* ಡಾ॥ ಕಾಶೀನಾಥ ಅಂಬಲಗೆ "ಬೇವು ಬೆಲ್ಲ" ಪ. ವಿ. ರಸ್ತೆ ಗುಲಬರ್ಗಾ
* ವಿಕ್ರಮ ವಿಸಾಜಿ ತಹಸೀಲ ಕಚೇರಿ ಹತ್ತಿರ ಭಾಲ್ಕಿ (ಬೀದರ)
* ಎಚ್. ಬಾಷಾ ಸಾಹೇಬ್ ಜೆ. ಇ. ಕಾರ್ಯಾಗಾರ ಯಾತ್ರಿಕ ಶಾಖೆ, ಕೆಂಭಾವಿ
* ಅಶೋಕ ಘೋರಾತ್ ಕೆನರಾ ಬ್ಯಾಂಕ ಚಾಟಿಗಲ್ಲಿ ಸೋಲಾಪೂರ (ಮಹಾರಾಷ್ಟ್ರ)
* ಶೀಲಾದೇವಿ ಸಿ. ಆರ್. ಪಿಡಬ್ಲ್ಯುಡಿ ಕ್ವಾಟ್ರಸ್ ಹೊಸಮನೆ ರಸ್ತೆ ೩೩ ಚಿಕ್ಕಮಂಗಳೂರ
* ಕಮಲಾಮೂರ್ತಿ ನಂ. ೧೩೪, ೪ನೇ ಅಡ್ಡರಸ್ತೆ, ಈದಗಾ ಮೊಹಲ್ಲಾ ತುಮಕೂರ ೫೭೨೧೦೧
* ಡಾ॥ ಬೆಸಗರಹಳ್ಳಿ ರಾಮಣ್ಣ ಅಂಚೆ, ಮಂಡ್ಯ
* ಬರಗೂರು ರಾಮಚಂದ್ರಪ್ಪ,ಅಧ್ಯಕ್ಷರು ಕರ್ನಾಟಕ ಸಾಹಿತ್ಯ ಅಕಾಡೆಮಿ,ಬೆಂಗಳೂರ
* ವಿಠ್ಠಪ್ಪ ಗೋರಂಟ್ಲಿ ಭಾಗ್ಯ ನಗರ ಕೊಪ್ಪಳ (ರಾಯಚೂರ)
* ಶಾಂತಪ್ಪ ಬೂದಿಹಾಳ ಅಂಚೆ, ರಂಗಂಪೇಟ, ತಾ॥ ಸುರಪೂರ
* ಎಂ. ಜಿ. ಜೇವರ್ಗಿ ಸ. ಕಿ. ಮಾ. ವಿದ್ಯಾಲಯ ಶಹಾಪೂರ

---

## ಸಾದರ ಸ್ವೀಕಾರಕ್ಕೆ ಬಂದ ಪುಸ್ತಕಗಳು

ಮೂಡಣ ಕಿರಣ : ರಾಮನಲ್ಲಿ ರಾವಣ (ಜಂಟಿ ಕವನ ಸಂಕಲನ) ರೇವತಿ ಉಪ್ಪಿನ
ಸಿದ್ದರಾಮ ಉಪ್ಪಿನ, ಸ್ನೇಹ ಪ್ರಕಾಶನ, ಶಹಾಪೂರ
ನೆಲೆ ಪ್ರಕಾಶನ ಸಿಂದಗಿಯವರಿಂದ ೧) ಹೇಳಿಕಿ ಮಾದ್ಯಾರು ಒದರ್ಯಾರು
ಡಾ॥ ಎಂ. ಎಂ. ಪಡಶೆಟ್ಟಿ

## ಸಾದರ ಸ್ವೀಕಾರ ಕೃತಿಗಳು

"ಇಂಡಿಯಾದಲ್ಲಿ" (ಕವನ ಸಂಕಲನ)
ಪ್ರೊ: ಚೆನ್ನಪ್ಪಾ ಕಟ್ಟಿ, ಸಿಂದಿಗಿ.

"ವಸಂತ" (ಕವನ ಸಂಕಲನ)
ಪ್ರೊ: ರಾಮಪೂರ, ಸಿಂದಗಿ.

"ಮೊಗ್ಗು ಬಿರಿದಾಗ" (ಕಾದಂಬರಿ)
ಶ್ರೀಮತಿ ಶೈಲಜಾ ಕೊಪ್ಪರ ಸಿಂದಗಿ.

"ಈ ನೆಲದೊಡಲಿನಿಂದ (ಕವನ ಸಂಕಲನ)
ವಿಠ್ಠಪ್ಪ ಗೋರಂಟ್ಲಿ ಭಾಗ್ಯ ನಗರ, ಕೊಪ್ಪಳ

PRINTED MATTER
BOOK POST

ಗೆ,
ಶ್ರೀಮತಿ/ಶ್ರೀ

ಸಂಪಾದಕ, ಪ್ರಕಾಶಕ, ಮುದ್ರಕ, ಃ ತಿಮ್ಮಯ್ಯ ಪುರ್ಲೆ
ಪುರ್ಲೆ ಪ್ರಿಂಟರ್ಸ್, ಶಹಾಪೂರ-೫೮೫ ೨೨೩ (ಕಲಬುರ್ಗಿ ಜಿಲ್ಲೆ)